ಶ್ರೀ ಮಹಾತಾಯಿಯವರ

# ಸುಂದರ ಕಥೆಗಳು









ಕನ್ನಡಿಸಿದವರು :

ಸಿಂಪಿ ಲಿಂಗಣ್ಣ

ಶ್ರೀ ಮಹಾತಾಯಿಯವರ

# ಸುಂದರ ಕಥೆಗಳು








ಕನ್ನಡಿಸಿದವರು

**ಸಿಂಪಿ ಲಿಂಗಣ್ಣ**

ಚಡಚಣ (ಜಿ. ವಿಜಾಪೂರ)


ಬೆಲೆ : ರೂ. ೧—೪—೦

ಪ್ರಕಾಶಕರು :

ಶ್ರೀ. ಸಿಂಪಿ ಲಿಂಗಣ್ಣ
ಶ್ರೀ ಅರವಿಂದ ಗ್ರಂಥಾಲಯ
ಚಡಚಣ
( ಜಿ. ವಿಜಾಪುರ )



ಪುಸ್ತಕಗಳು ಸಿಗುವ ಸ್ಥಳ :

ಶ್ರೀ ಅರವಿಂದ ಆಶ್ರಮ, ಪಾಂಡಿಚೇರಿ.
ಶ್ರೀ ಅರವಿಂದ ಮಂಡಲ, ಬಿಜಾಪುರ.
ಶ್ರೀ ಅರವಿಂದ ಮಂಡಲ, ದೇಶಪಾಂಡೆನಗರ, ಹುಬ್ಬಳ್ಳಿ.
ಶ್ರೀ ಅರವಿಂದ ಗ್ರಂಥಾಲಯ, ಚಡಚಣ, ಬಿಜಾಪುರ ಜಿಲ್ಲೆ.
ಶ್ರೀ ಅರವಿಂದ ಮಂಡಲ, ಹಲಸಂಗಿ, ಬಿಜಾಪುರ ಜಿಲ್ಲೆ.



ಮೊದಲ ಮುದ್ರಣ : ಅಗಸ್ಟ ೧೫, ೧೯೫೪

ಮುದ್ರಕರು :
ಶ್ರೀ. ವಿನೀತ ರಾಮಚಂದ್ರರಾಯರು,
ಉದಯ ಮುದ್ರಣಾಲಯ,
ಧಾರವಾಡ.

# ಪರಿವಿಡಿ



# ಅರಿಕೆ



"ಸುಂದರ ಕಥೆಗಳು" ಶ್ರೀ ತಾಯಿಯವರು (ಪಾಂಡಿಚೇರಿಯ ಶ್ರೀ ಅರವಿಂದ ಆಶ್ರಮ) ಬರೆದವುಗಳು. ಅವುಗಳನ್ನು ಹಿಂದಿಯಿಂದ ಕನ್ನಡಿಸಿ ಪ್ರಕಟಿಸುವುದಕ್ಕೆ ಆಶ್ರಮದಿಂದ ಒಪ್ಪಿಗೆ ಸಿಕ್ಕು ಬಹಳ ದಿವಸ ಕಳೆದವು. ಅವುಗಳನ್ನು ಪ್ರಕಾಶಗೊಳಿಸಬೇಕೆಂದು ನಿರ್ಣಯಿಸಿದ ಗೆಳೆಯ ರೊಬ್ಬರಿಗೆ, ಅನೇಕ ತಡೆಗಳೊಡ್ಡಿದುದೇ ಅದಕ್ಕೆ ಕಾರಣವೆನ್ನಬೇಕಾಗಿದೆ.

ಶ್ರೀ ಅರವಿಂದ ಮಂಡಲದಿಂದ ಈಗ ಅದನ್ನು ಪ್ರಕಟಿಸಲಾಗುತ್ತಿದೆ. ಆ ಪುಸ್ತಕದಲ್ಲಿ ಉಪಯೋಗಿಸುವ ಭಾವಚಿತ್ರವನ್ನು ಆಶ್ರಮದಿಂದ ಶ್ರೀ. ಮಾಧವ ರಾವ ಪಂಡಿತರವರು ಕಳಿಸಿಕೊಟ್ಟು ಮಹೋಪಕಾರ ಮಾಡಿದ್ದಾರೆ. ಇದ ರೊಳಗಿನ ಕಥೆಗಳನ್ನು ಬಾಲಕರು, ತರುಣರು ಓದಬೇಕಲ್ಲದೆ ಹೆಣ್ಣುಮಕ್ಕಳು, ಇಳಿವಯಸ್ಸಿನವರು ಓದದೆ ಬಿಡಬಾರದೆಂದು ನಮ್ಮ ಆಗ್ರಹದ ಸೂಚನೆ ಅದೆ. ಕಥೆಗಳನ್ನೋದಿ ಶ್ರೀ ತಾಯಿಯವರ ಅಕ್ಕರೆ, ವಿಶಾಲ ಹೃದಯ, ಆತ್ಮೀಯತೆ ಇವುಗಳ ಸವಿಯನ್ನು ಸವಿಯಬಹುದು. ಶ್ರೀ ತಾಯಿಯವರನ್ನು ಕಂಡವರೇ ಕ್ವಚಿತ್ತಾಗಿರುವಾಗ ಅವರ ಮಾತು ಕೇಳಿದವರಂತೂ ಇಲ್ಲವೇ ಇಲ್ಲವೆನ್ನುವಷ್ಟು ವಿರಳ. ಈ ಕಥೆಗಳು ಅವರೊಡನೆ ಮಾತಾಡಿದ ಅನುಭವವನ್ನು ತಂದುಕೊಡ ಬಲ್ಲವೆಂದು ಹೇಳಲು ಅಡ್ಡಿಯಿಲ್ಲ.

ಪುಸ್ತಕವನ್ನು ಸಾವಕಾಶವಾಗಿಯಾದರೂ ಸಾಕಷ್ಟು ಸುಂದರವಾಗಿ ಮುದ್ರಿಸಿಕೊಟ್ಟ "ಉದಯ" ಮುದ್ರಣಾಲಯದ ವ್ಯವಸ್ಥಾಪಕರಿಗೆ ನಮ್ಮ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

ತಾ|| ೨೫—೭—೫೪

—ಸಿಂಪಿ ಲಿಂಗಣ್ಣ
ಚಡಚಣ

# ಸುಂದರ ಕಥೆಗಳು

## ಆತ್ಮಸಂಯಮ

ನಾವು ಒಂದು ಕಾಡುಕುದುರೆಯನ್ನು ವಶಪಡಿಸಿಕೊಳ್ಳಬಲ್ಲೆವು. ಆದರೆ ಒಂದು ಹುಲಿಯ ಬಾಯಿಗೆ ಕಡಿವಾಣ ಹಾಕಲಾರೆವು.

ಹೀಗೇಕೆ? ಯಾಕೆಂದರೆ ಹುಲಿಯ ಸ್ವಭಾವದಲ್ಲಿ ಕ್ರೂರತನವಿರುತ್ತದೆ. ಅದನ್ನು ಯಾವ ವಿಧದಿಂದಲೂ ತಿದ್ದಲಿಕ್ಕೆ ಶಕ್ಯವಿಲ್ಲ. ಇದೇ ಕಾರಣದಿಂದ ನಾವು ಅದರೊಡನೆ ಯಾವ ಒಳ್ಳೆಯ ವ್ಯವಹಾರವನ್ನೂ ಆಶಿಸುವದಿಲ್ಲ. ತಿರುಗಿ ಅದನ್ನು ಕೊಂದುಹಾಕುವ ಎತ್ತುಗಡೆಗೇ ತೊಡಗಿಬಿಡುತ್ತೇವೆ. ಹಾಗೆ ಮಾಡಿಬಿಟ್ಟರೆ ಅದು ನಮಗೆ ಯಾವ ಹಾನಿಗೂ ಈಡುಮಾಡಲಾರದು.

ಇದಕ್ಕೆ ವಿಪರೀತವಾಗಿ ಒಂದು ಅಡವಿಯ ಕುದುರೆಯನ್ನು, ಮೊದಲಿಗೆ ಅದು ಎಷ್ಟೇ ಕಿಡಿಗೇಡಿ–ಹಟಮಾರಿ ಆಗಿದ್ದರೂ ಕೆಲವೊಂದು ಯತ್ನದಿಂದಲೂ ಧೈರ್ಯದಿಂದಲೂ ಅದನ್ನು ವಶದಲ್ಲಿ ತಂದುಕೊಳ್ಳಲು ಸಾಧ್ಯವದೆ. ಕೆಲವು ದಿನಗಳ ಮೇಲೆ ಅದು ನಮ್ಮ ಆಜ್ಞೆಯನ್ನು ಪಾಲಿಸುವುದಕ್ಕೂ ನಮ್ಮನ್ನು ಪ್ರೀತಿಸುವುದಕ್ಕೂ ಕಲಿತು ಬಿಡುತ್ತದೆ. ಕೊನೆಯಲ್ಲಂತೂ ಅದು ಕಡಿವಾಣ ಹಾಕುವಾಗ ತನ್ನ ಮುಖವನ್ನು ಮುಂದೆ ಚಾಚಿಕೊಡುತ್ತದೆ.

ಮನುಷ್ಯನಲ್ಲಿ ಸಹ ಕೆಲವು ಅಡನಾಡಿಯಾದ ಹಾಗೂ ಕಿಡಿಗೇಡಿಯಾದ ಪ್ರವೃತ್ತಿಗಳೂ ಇಚ್ಛೆಗಳೂ ಇರುತ್ತವೆ. ಒಬ್ಬೊಬ್ಬರಲ್ಲಿ ಹುಲಿಯಂತೆ ವಶದಲ್ಲಿ ತಂದುಕೊಳ್ಳಲಿಕ್ಕಾಗದಂಥವುಗಳೂ ಇರಬಲ್ಲವು. ಹೆಚ್ಚಾಗಿ ಅಡವಿಯ ಕುದುರೆಯಂಥ ಪ್ರವೃತ್ತಿಗಳೇ ಇರುತ್ತವೆ. ಅವುಗಳ ಸುಧಾರಣೆಗೆ ಒಂದೇ ಒಂದು ಕಡಿವಾಣದ ಅವಶ್ಯಕತೆ ಇರುತ್ತದೆ. ತನ್ನ ಸ್ವಂತ ಪ್ರವೃತ್ತಿಗಳಿಗೆ ಹಾಕುವ ಕಡಿವಾಣವೇ ಮನುಷ್ಯನಿಗೆ ಎಲ್ಲಕ್ಕೂ ಹೆಚ್ಚಿನ ಕಡಿವಾಣವಾಗಿದೆ. ಇದಕ್ಕೇ ನಾವು ಆತ್ಮಸಂಯಮನವೆನ್ನುತ್ತೇವೆ.

ಹುಸೇನನು ಮಹಮ್ಮದ ಪೈಗಂಬರರ ಮೊಮ್ಮಗನು. ಅವನು ವಾಸಿಸುತ್ತಿದ್ದ ಮನೆಯು ಬಹು ಮೇಲ್ತರದ್ದಾಗಿತ್ತು. ಚೀಲುಗಳು ಹೊನ್ನನಾಣ್ಯಗಳಿಂದ ತುಂಬಿದ್ದವು. ಅವನನ್ನು ಅಪ್ರಸನ್ನಗೊಳಿಸುವುದೆಂದರೆ ಭಾಗ್ಯಪುರುಷನನ್ನು ಅಪ್ರಸನ್ನಗೊಳಿಸಿದಂತೆಯೇ ಸರಿ. ಧನಿಯನು ಬಹುಭಯಂಕರವಾದ ಸಿಟ್ಟಿನವನು.

ಒಂದು ದಿನ ನಡೆದ ಸಂಗತಿಯೇನಂದರೆ— ಒಬ್ಬ ಜೀತದಾಳು ( ಗುಲಾಮ ) ಕುದಿಯುತ್ತಿರುವ ನೀರಿನ ಪಾತ್ರೆಯನ್ನು ಎತ್ತಿಕೊಂಡು ಹುಸೇನನ ಹತ್ತಿರದಿಂದ ಹೋಗುತ್ತಿರುವಾಗ ಅವನು ಊಟಮಾಡುತ್ತಿದ್ದನು. ದುರ್ಭಾಗ್ಯವಶದಿಂದ ನೀರು ತುಸು ತುಳುಕಿ ಪೈಗಂಬರರ ಮೊಮ್ಮಗನ ಮೇಲೆ ಚಲ್ಲಿದವು. ಅವನು ಸಿಟ್ಟಿನಿಂದ ಕೂಗಾಡತೊಡಗಿದನು.

ಜೀತದಾಳು ಮೊಳಕಾಲೂರಿ ಕುಳಿತುಬಿಟ್ಟನು. ಅವನ ಮನಸ್ಸು ಆ ಕಾಲಕ್ಕೆ ಅದೆಷ್ಟು ಸ್ವಸ್ಥವೂ ಸಂಯತವೂ ಆಗಿದ್ದಿತೆಂದರೆ ಅವನ ಬಾಯಿಗೆ ಕುರಾನದ ಒಂದು ವಾಕ್ಯವು ಬಂದುಬಿಟ್ಟಿತು.

“ಸಿಟ್ಟನ್ನು ವಶದಲ್ಲಿ ಇಟ್ಟುಕೊಂಡವರ ಸಲುವಾಗಿ ಸ್ವರ್ಗವಿದೆ.” ಎಂದು ನುಡಿದನು.

[redacted]



ಆ ಮಾತಿನ ಅರ್ಥವನ್ನು ಚೆನ್ನಾಗಿ ತಿಳಕೊಳ್ಳಹತ್ತಿದ್ದರಿಂದ ಹುಸೇನನು ನಡುವೆಯೇ ಮಾತೆತ್ತಿ "ನಾನು ಸಿಟ್ಟಿಗೆ ಬಂದಿಲ್ಲ" ಎಂದು ಹೇಳಿದನು.

"ಮತ್ತು ಯಾರು ಮನುಷ್ಯರನ್ನು ಕ್ಷಮಿಸುತ್ತಾರೆಯೋ ಅವರ ಸಲುವಾಗಿ ಸ್ವರ್ಗವಿದೆ." ಎಂದು ಜೀತದಾಳು ನುಡಿದನು.

"ನಾನು ನಿನ್ನನ್ನು ಕ್ಷಮಿಸುತ್ತೇನೆ" ಎಂದು ಹುಸೇನನು ಹೇಳಿದನು.

"ಯಾಕಂದರೆ ಪರಮಾತ್ಮನು ದಯಾಳು ವ್ಯಕ್ತಿಗಳನ್ನು ಪ್ರೇಮಿಸುತ್ತಾನೆ" ಎಂದು ಜೀತದಾಳು ಮಾತು ಕೊನೆಗೊಳಿಸಿದನು.

ಈ ಸಂಭಾಷಣೆ ಮುಗಿಯಿತೋ ಇಲ್ಲವೋ ಹುಸೇನನ ಎಲ್ಲ ಸಿಟ್ಟೂ ಮಾಯವಾಗಿ ಹೋಯಿತು. ತನ್ನ ಹೃದಯವು ಅತ್ಯಂತ ಕೋಮಲವಾಗಿ ಬಿಟ್ಟಿತೆಂದು ಅವನ ಅನುಭವಕ್ಕೆ ಬಂದಿತು. ಜೀತದಾಳನ್ನು ಎಬ್ಬಿಸುತ್ತ ಅವನಿಗೆ ಹೇಳಿದ್ದೇನಂದರೆ— "ತೆಗೆದುಕೋ, ಈ ನಾಲ್ಕು ನೂರು 'ದರಹಂ' ಗಳನ್ನು ತೆಗೆದುಕೋ. ನೀನು ಇಂದಿನಿಂದ ಸ್ವತಂತ್ರನು."

ಈ ಪ್ರಕಾರ ಹುಸೇನನು ತನ್ನ ದುಡುಕುಮನಸ್ಸಿಗೆ—ಅದು ತುಂಬ ಉದಾರವಾಗಿದ್ದುದರಿಂದ ಕಡಿವಾಣ ಹಾಕಲಿಕ್ಕೆ ಕಲಿತನು. ಅವನ ಸ್ವಭಾವವು ಹೀನವೂ ಆಗಿದ್ದಿಲ್ಲ, ಕಠೋರವೂ ಆಗಿದ್ದಿಲ್ಲ. ವಶದಲ್ಲಿ ತಂದುಕೊಳ್ಳಲಿಕ್ಕೆ ಶಕ್ಯವಿರುವಂತೆ ಅನುಕೂಲವಾಗಿತ್ತು.

ಆದಕಾರಣ ಬಾಲಕರೇ, ನಿಮ್ಮ ತಾಯಿತಂದೆಗಳಾಗಲಿ, ಶಿಕ್ಷಕರಾಗಲಿ ನಿಮಗೆ ನಿಮ್ಮ ಸ್ವಭಾವವನ್ನು ವಶಪಡಿಸಿಕೊಳ್ಳುವ ಸಲುವಾಗಿ ಹೇಳುವರು. ನಿಮ್ಮ ಸಣ್ಣ ದೊಡ್ಡ ದೋಷಗಳು ಯಾವ ಉಪಾಯದಿಂದಲೂ ಸುಧಾರಿಸಲಾರವೆಂದು ಅವರೆಣಿಸುವದಿಲ್ಲ. ಆದರೆ ನಿಮ್ಮ ಓಟದ ಹಾಗೂ ದುಡುಕಿನ

ಮನಸ್ಸು ಒಳ್ಳೆಯ ತಳಿಯ ಕುದುರೆಮರಿಯಂತಿದೆಯೆಂದೂ ಅದಕ್ಕೆ ಕಡಿವಾಣವು ಬೇಕೇಬೇಕೆಂದೂ ಹಾಗೆ ಹೇಳುವರು.

ಒಂದು ಬಡಗುಡಿಸಲು ಮತ್ತು ಒಂದು ಅರಮನೆ ಇವುಗಳಲ್ಲಿ ಯಾವುದನ್ನು ನೀವು ಇರುವುದಕ್ಕೆಂದು ಆರಿಸಿಕೊಳ್ಳುತ್ತೀರಿ ? ಅರಮನೆಯನ್ನು ಆರಿಸಿಕೊಳ್ಳುತ್ತೀರಿ—ಸಂಶಯವಿಲ್ಲ.

ಒಂದು ಕಥೆಯಿದೆ ಏನಂದರೆ—ಹಜರತ ಮಹಮ್ಮದರವರು ಒಮ್ಮೆ ಸ್ವರ್ಗವನ್ನು ನೋಡುವ ಸಲುವಾಗಿ ಹೋದಾಗ ಅಲ್ಲಿ ಅವರು, ತುಸು ಎತ್ತರವಾಗಿ ಕಟ್ಟಿತೆಗೆದ ಕೆಲವೊಂದು ದೊಡ್ಡ ದೊಡ್ಡ ಉಪ್ಪರಿಗೆಗಳನ್ನು ನೋಡಿದರು. ಅವುಗಳ ಸೌಂದರ್ಯದ ಮುಂದೆ ಸರ್ವದೇಶದ ಸೌಂದರ್ಯವು ನಿಸ್ಸಾರವಾಗಿತ್ತು.

“ಓ! ಜಿಬ್ರಾಯಿಲರೇ” ಎಂದು ಮಹಮ್ಮದರು ಕೂಗಿ ತಮಗೆ ಸ್ವರ್ಗವನ್ನು ತೋರಿಸುತ್ತಿದ್ದ ದೇವದೂತನಿಗೆ ಕೇಳಿದರು— “ಈ ಉಪ್ಪರಿಗೆಗಳನ್ನು ಯಾರ ಸಲುವಾಗಿ ಕಟ್ಟಿದ್ದಾರೆ ?”

ದೇವದೂತನು ಮರುನುಡಿದನು.— “ಯಾರು ಸಿಟ್ಟನ್ನು ತಮ್ಮ ವಶದಲ್ಲಿರಿಸಿಕೊಂಡಿರುತ್ತಾರೋ ಅವರ ಸಲುವಾಗಿ. ಹಾಗೂ ತಮಗೆ ಕೇಡು ಬಗೆಯುವವರನ್ನು ಸಹ ಯಾರು ಕ್ಷಮಿಸಬಲ್ಲರೋ ಅವರ ಸಲುವಾಗಿ.”

ನಿಜವಾಗಿ, ಶಾಂತವೂ ದ್ವೇಷರಹಿತವೂ ಆದ ಮನವೊಂದು ವಾಸ್ತವಿಕವಾಗಿ ಉಪ್ಪರಿಗೆಯಂತೆಯೇ ಇರುತ್ತದೆ. ಆದರೆ ಈ ಮಾತು ಒಂದು ಆವೇಶಯುಕ್ತವೂ ಪ್ರತಿಹಿಂಸಾಪೂರ್ಣವೂ ಆದ ಮನಸ್ಸಿನ ವಿಷಯದಲ್ಲಿ ಹೇಳಲಾಗುವದಿಲ್ಲ. ನಮ್ಮ ಮನವೊಂದು ನಮ್ಮ ಮನೆ ಇದ್ದಹಾಗಿದೆ. ಅದನ್ನು ನಾವು ನಮ್ಮ ಇಚ್ಛೆಯಂತೆ ಸ್ವಚ್ಛ, ಶಾಂತ ಹಾಗೂ ಮಧುರವನ್ನಾಗಿ ಮಾಡಿಕೊಳ್ಳಲು ಸಾಧ್ಯವದೆ. ಇಂಥ ಮನೆಯು ಅಪಸ್ವರವಲ್ಲದ ತಾಳ

ಬದ್ಧವಾದ ಸ್ವರಗಳಿಂದ ತುಂಬಿರುತ್ತದೆ. ಆದರೆ, ನಾವು ಬೇಕಾದರೆ ಅದನ್ನು ದುಃಖಪ್ರದವಾದ ಶಬ್ದಗಳಿಂದಲೂ ಅಪಸ್ವರದ ಕೂಗಾಟಗಳಿಂದಲೂ ತುಂಬಿದ ಹಾಗೂ ಹೆದರಿಕೆ ಹುಟ್ಟಿಸುವ ಒಂದು ಕತ್ತಲೆಗವಿಯನ್ನು ಸಹ ಮಾಡಿಕೊಳ್ಳಬಲ್ಲೆವು.

ಉತ್ತರಫ್ರಾನ್ಸದ ಒಂದು ನಗರದಲ್ಲಿ ಇರುತ್ತಿದ್ದ ಒಬ್ಬ ಬಾಲಕನೊಡನೆ ನನ್ನ ಪರಿಚಯವಿತ್ತು. ಅವನು ಬಾಲಕನಾಗಿದ್ದರೂ ಅವನ ಮನಸ್ಸು ಬಹು ಸರಲವಾಗಿತ್ತು. ಆದರೆ ಅವನ ಹೃದಯವು ಬಲು ಉತ್ಸಾಹಪೂರ್ಣವಾಗಿತ್ತು. ಸಿಟ್ಟಿಗೇಳುವುದಕ್ಕಾಗಿ ಅವನು ಯಾವಾಗಲೂ ಸಿದ್ಧನಾಗಿಯೇ ಇರುತ್ತಿದ್ದನು.

ಒಂದು ದಿನ ನಾನು ಅವನಿಗೆ ಹೇಳಿದ್ದೇನಂದರೆ— "ತುಸು ಎಣಿಕೆ ಹಾಕಿ ನೋಡಿದರೆ ನಿನ್ನಂಥ ಹೃಷ್ಟಪುಷ್ಟ ಬಾಲಕನಿಗೆ ಯಾವ ಮಾತು ಹೆಚ್ಚು ಕಠಿಣವಿದೆ—ಏಟಿಗೆ ಬದಲು ಮರು ಏಟು ಕೊಡುವುದು ಅಂದರೆ ಹೊಡೆದವನ ಮುಖದ ಮೇಲೆ ಗುದಿಕೆ ಕೊಡುವುದೋ ಇಲ್ಲವೆ, ಸರಿಯಾಗಿ ಆ ಕೂಡಲೇ ತನ್ನ ಮುಷ್ಟಿಯನ್ನು ಚಕ್ಕನೆ ಕಿಸೆಯಲ್ಲಿ ಹಾಕಿಕೊಳ್ಳುವುದೋ?"

"ತನ್ನ ಮುಷ್ಟಿಯನ್ನು ಕಿಸೆಯಲ್ಲಿ ಹಾಕಿಕೊಳ್ಳುವುದು" ಎಂದವನು ಉತ್ತರ ಕೊಟ್ಟನು.

"ಒಳ್ಳೆಯದು. ಹಾಗಾದರೆ ಇನ್ನು ನಿನ್ನಂಥ ಸಾಹಸಿಯಾದ ಬಾಲಕನು ಎಲ್ಲರೂ ಮಾಡಬಹುದಾದ ಹಗುರು ಕೆಲಸ ಮಾಡುವುದು ಉಚಿತವೋ ಅದಕ್ಕೆ ವಿಪರೀತವಾಗಿ ಎಲ್ಲರಿಗೂ ಮಾಡಲಿಕ್ಕಾಗದ ಗಡಚು ಕೆಲಸವನ್ನು ಮಾಡುವುದು ಉಚಿತವೋ—ಹೇಳಿಬಿಡು."

ಒಂದು ಕ್ಷಣಹೊತ್ತು ಯೋಚಿಸಿ ತುಸು ಬಾಯಿಸವರುತ್ತ ಉತ್ತರ ಹೇಳಿದನು— "ಎಲ್ಲರಿಗೂ ಮಾಡಲಿಕ್ಕಾಗದ ಗಡಚು ಕೆಲಸ."

“ಬಹಳ ಒಳ್ಳೆಯದು. ಇನ್ನು ಮತ್ತೊಂದು ಸಾರೆ ಅಂಥ ಪ್ರಸಂಗ ಬಂದಾಗ ಹಾಗೆಯೇ ಮಾಡಲು ಯತ್ನಿಸಬೇಕು.”

ಆದಾದ ಕೆಲವು ದಿನಗಳ ತರುವಾಯ ಆ ತರುಣನು ಒಂದು ದಿವಸ ನನ್ನ ಹತ್ತಿರ ಬಂದನು. ಆತನು ಸಮುಚಿತವಾದ ಹೆಮ್ಮೆಯೊಡನೆ, ನಾನು ಎಲ್ಲರಿಗೂ ಮಾಡಲಿಕ್ಕಾಗದ ಗಡಚು ಕೆಲಸ ಮಾಡುವುದರಲ್ಲಿ ಸಫಲನಾಗಿದ್ದೇನೆಂದು ಹೇಳಿದನು.

ಅವನು ಮುಂದುವರಿಸಿದ್ದೇನಂದರೆ—ಕಾರಖಾನೆಯಲ್ಲಿ ನನ್ನೊಡನೆ ಕೆಲಸ ಮಾಡುವ ಒಬ್ಬ ಜೊತೆಗಾರನು ಹೀನಸ್ವಭಾವದ ಬಗ್ಗೆ ಪ್ರಸಿದ್ಧನಾಗಿದ್ದನು. ಅವನು ಸಿಟ್ಟಿನಿಂದ ಬಂದವನೇ ನನ್ನನ್ನು ಹೊಡೆದುಬಿಟ್ಟನು. ಯಾಕಂದರೆ—ನಾನು ಸಾಮಾನ್ಯವಾಗಿ ಕ್ಷಮಿಸತಕ್ಕವನಲ್ಲವೆಂಬುದನ್ನೂ ನನ್ನ ರಟ್ಟೆಯಲ್ಲಿ ಬಲವಿದೆಯೆಂಬುದನ್ನೂ ಅವನು ಬಲ್ಲವನಾಗಿದ್ದನು. ಅವನು ತನ್ನನ್ನು ರಕ್ಷಿಸಿಕೊಳ್ಳುವುದಕ್ಕೆ ಸಿದ್ಧನಾಗಿ ನಿಂತನು. ಆ ಸಮಯಕ್ಕೆ ತಟ್ಟನೆ ತಾವು ಕಲಿಸಿಕೊಟ್ಟ ಮಾತು ನೆನಪಿಗೆ ಬಂತು. ಆದರಂತೆ ಮಾಡಲಿಕ್ಕೆ ನಾನು ಯೋಚಿಸಿದಷ್ಟಕ್ಕಿಂತ ತುಸು ಹೆಚ್ಚಾಗಿಯೇ ಬಿಗಿಯಾಯಿತು. ಆದರೆ ನಾನು ನನ್ನ ಮುಷ್ಟಿಯನ್ನು ನನ್ನ ಕಿಸೆಯಲ್ಲಿ ಹಾಕಿಕೊಂಡೇ ಬಿಟ್ಟೆನು. ನಾನು ಹಾಗೆ ಮಾಡಿದ ಕೂಡಲೇ ನನ್ನ ಸಿಟ್ಟು ಎಲ್ಲಿ ಕಾಣೆಯಾಗಿಬಿಟ್ಟಿತೋ ತಿಳಿಯಲಿಲ್ಲ. ಆದರ ಸ್ಥಳದಲ್ಲಿ ನನ್ನ ಆ ಜೊತೆಗಾರನ ಮೇಲೆ ತಿರುಗಿ ದಯೆಯು ಆವರಿಸಿತು. ಆಗ ನಾನು ಅವನ ಕಡೆಗೆ ನನ್ನ ಕೈಚಾಚಿದೆನು. ಇದರಿಂದ ಅವನಿಗೆ ಅದೆಷ್ಟು ಆಶ್ಚರ್ಯವಾಯಿತೆಂದರೆ—ಒಂದು ಕ್ಷಣಹೊತ್ತು ಅವನು ಬಾಯಿಮುಚ್ಚಿ ನನ್ನ ಕಡೆಗೆ ಹೊಂಚಿನಿಂತನು. ಒಂದು ಶಬ್ದವನ್ನು ಸಹ ನುಡಿಯಲಿಕ್ಕಾಗಲಿಲ್ಲ. ಅಲ್ಲದೆ ಅವನು ತಟ್ಟನೆ ನನ್ನ ಕೈಮೇಲೆ ಕುಪ್ಪಳಿಸಿದನು. ನಾನು ಅವನನ್ನು ಗಟ್ಟಿಯಾಗಿ ಹಿಡಕೊಂಡೆನು. ಅವನು ಒಮ್ಮೆಲೆ ಕರಗಿ ನೀರಾಗಿ— “ಇಂದಿನಿಂದ ನೀನು ನನಗೆ ಬೇಕಾದ್ದನ್ನು ಮಾಡಬಲ್ಲಿ. ನಾನು ನಿನಗೆ ನಿರಂತರಮಿತ್ರನಾಗಿಬಿಟ್ಟಿದ್ದೇನೆ.” ಎಂದನು.

ಆ ಬಾಲಕನು ತನ್ನ ಸಿಟ್ಟನ್ನು ಖಲೀಫಾ ಹುಸೇನನು ಮಾಡಿದ ಪ್ರಕಾರ ವಶಕ್ಕೆ ತಂದುಕೊಂಡನು.

ಆದರೆ ಇವನ್ನುಳಿದು, ಅವಶ್ಯವಾಗಿ ವಶಪಡಿಸಿಕೊಳ್ಳಬೇಕಾದ ಕೆಲವೊಂದು ವಿಷಯಗಳಿವೆ.

ಅರಬದೇಶದ ಕವಿಯಾದ ಅಲ್‌ಕೋಜಾಯಿಯು ರೇಗಿಸ್ತಾನದಲ್ಲಿ ಇರುತ್ತಿದ್ದನು. ಒಂದು ದಿವಸ ಅವನು 'ನಾಬಾ' ದ ಒಂದು ಸುಂದರವಾದ ಮರವನ್ನು ಕಂಡನು. ಅವನು ಅದರ ಕವಲುಗಳಿಂದ ಒಂದು ಬಿಲ್ಲನ್ನೂ ಕೆಲವು ಬಾಣಗಳನ್ನೂ ಮಾಡಿಕೊಂಡನು.

ರಾತ್ರಿಯಲ್ಲಿ ಅವನು ಕಾಡುಕತ್ತೆಗಳನ್ನು ಬೇಟೆಯಾಡಬೇಕೆಂದು ಹೊರಟನು. ತುಸು ಹೊತ್ತಿನಲ್ಲಿಯೇ ಅವನು ಕತ್ತೆಗಳ ಒಂದು ಹಿಂಡಿನ ಕಾಲಸಪ್ಪಳವನ್ನು ಕೇಳಿದನು. ಅವನು ಒಂದು ಬಾಣವನ್ನು ಬಿಟ್ಟನು. ಆದರೆ ಅವನು ಬಿಲ್ಲಿನ ಹದೆಯನ್ನು ಅದೆಷ್ಟು ಬಲವಾಗಿ ಪ್ರಯೋಗಿಸಿದನೆಂದರೆ— ಬಾಣವು ಹಿಂಡಿನೊಳಗಿನ ಒಂದು ಪ್ರಾಣಿಯ ಶರೀರವನ್ನು ಭೇದಿಸಿದ್ದಲ್ಲದೆ ಹತ್ತಿರದ ಒಂದು ಬಂಡೆಗಲ್ಲಿಗೆ ಹೋಗಿ ಟಕ್ಕರಿಸಿತು. ಬಂಡೆಗಲ್ಲಿಗೆ ಬಾಣವು ಟಕ್ಕರಿಸಿದ ಸಪ್ಪಳವನ್ನು ಕೇಳಿ ಅಲಕೋಜಾಯಿಯು ತನ್ನ ಹೊಡೆವು ನಿಷ್ಫಲವಾಯಿತೆಂದು ಎಣಿಸಿದನು. ಆಗ ಅವನು ಬೇರೊಂದು ಬಾಣವನ್ನು ಬಿಟ್ಟನು. ಈ ಸಾರೆಯೂ ಅದು ಒಂದು ಪ್ರಾಣಿಯ ಶರೀರದೊಳಗಿಂದ ಹಾಯಿದು ಬಂಡೆಗಲ್ಲಿಗೆ ಹೋಗಿ ಅಪ್ಪಳಿಸಿತು. ಈ ಸಾರೆಯೂ ಗುರಿತಪ್ಪಿಹೋಯಿತೆಂದು ಅಲಕೋಜಾಯಿಯು ತಿಳಿದನು. ಇದೇ ಬಗೆಯಾಗಿ ಅವನು ಮೂರನೇ ನಾಲ್ಕನೇ ಐದನೇ ಬಾಣಗಳನ್ನು ಪ್ರಯೋಗಿಸಿದನು. ಹಾಗೂ ಪ್ರತಿಯೊಂದು ಸಲ ಅವನು ಅದೇ ಸದ್ದನ್ನು ಕೇಳಿದನು. ಆಗಂತೂ ಅವನು ಸಿಟ್ಟಿಗೇರಿ ತನ್ನ ಬಿಲ್ಲನ್ನೇ ಮುರಿದುಹಾಕಿದನು.

ಮರುದಿನ ಬೆಳಗಾದ ಬಳಿಕ ಆಯ್ದೊ ಕತ್ತೆಗಳು ಬಾಣಗಳ ಬಳಿಯಲ್ಲಿ ಸತ್ತುಬಿದ್ದಿರುವುದನ್ನು ಅವನು ಕಂಡನು.

ಅವನಲ್ಲಿ ತುಸು ಹೆಚ್ಚು ಧೈರ್ಯವಿದ್ದಿದ್ದರೆ, ಅವನು ಹೊತ್ತು ಹೊರಡುವ ವರೆಗೆ ಕಾದಿದ್ದರೆ ತನ್ನ ಶಾಂತಿಯೊಡನೆ ಅವನು ತನ್ನ ಧನುಷ್ಯ ವನ್ನೂ ಉಳಿಸಿಕೊಳ್ಳುತ್ತಿದ್ದನು.

ಮನುಷ್ಯನ ಸದ್ಗುಣದ ಸರ್ವ ಉತ್ಸಾಹವನ್ನೂ ಬಲವನ್ನೂ ದೂರ ಗೊಳಿಸಿ ಅವನನ್ನು ದುರ್ಬಲಗೊಳಿಸುವ ಶಿಕ್ಷಣಕ್ಕೆ ನಾನು ಉಚಿತವೆಣಿಸಿರು ವೆನೆಂದು ಇದರಿಂದ ಯಾರೂ ತಿಳಕೊಳ್ಳಬಾರದು. ಯಾವುದೊಂದು ಕಾಡು ಕುದುರೆಗೆ ಕಡಿವಾಣ ಹಾಕುವುದು ಅದರ ಬಾಯಿಯನ್ನು ಹರಿಯು ವದಕ್ಕಾಗಿಯೂ ಅಲ್ಲ; ಅದರ ಹಲ್ಲು ಮುರಿಯುವದಕ್ಕಾಗಿಯೂ ಅಲ್ಲ. ಅದು ನಮ್ಮ ಇಚ್ಛೆಯಂತೆ ಒಳ್ಳೆಯ ರೀತಿಯಿಂದ ಕೆಲಸವನ್ನು ಪೂರ್ತಿಗೊಳಿಸುವ ದಾದರೆ ನಾವದನ್ನು ಚೆನ್ನಾಗಿ ನಡೆಸಲು ಶಕ್ಯವಾಗುತ್ತದೆಂದು ಅದಕ್ಕೆ ಕಡಿವಾಣ ಹಾಕತಕ್ಕದ್ದು ನಾವು ಕಡಿವಾಣವನ್ನು ನಿರ್ದಯತೆಯಿಂದ ಬಿಗಿ ಹಿಡಿದು ಹಿಂದೆ ಸಹ ಸರಿಯಲಿಕ್ಕೆ ಬಾರದ ಹಾಗೆ ಮಾಡುವುದಕ್ಕಲ್ಲ.

ಬಹುಜನ ದುರ್ಬಲಚರಿತ್ರರು ಹೆಚ್ಚು ಪ್ರಮಾಣದಲ್ಲಿ ಕುರಿಯ ಸ್ವಭಾವದವರೇ ಸಿಕ್ಕುತ್ತಿರುವುದು ನಿಜವಾಗಿ ದುರ್ಭಾಗ್ಯದ ಸಂಗತಿಯಾಗಿದೆ. ಅವರನ್ನು ನಡೆಸಿಕೊಂಡು ಹೋಗುವುದಕ್ಕೆ ವಾಡಿಕೆಯ ಕಥನವೇ ಬೇಕಾದಷ್ಟು ಇರುತ್ತದೆ.

ಕೆಲವು ಜೀತದಾಳುಗಳ ಸ್ವಭಾವವು ಜಡ, ದುರ್ಬಲ ಹಾಗೂ ಮೇರೆ ಮೀರಿದ ತೋರಿಕೆಯದು ಆಗಿರುತ್ತದೆ.

ಅಬುಉಸ್ಮಾನ ಅಲ-ಹಿರಿಯು ತನ್ನ ಅತ್ಯಧಿಕ ಧೈರ್ಯದ ಸಲುವಾಗಿ ಹೆಸರಾಗಿದ್ದನು. ಒಂದು ದಿನ ಅವನು ಒಂದು ಉತ್ಸವದಲ್ಲಿ ಸಹಭಾಗಿ

ಯಾಗುವುದಕ್ಕೆ ಆಮಂತ್ರಿತನಾಗಿದ್ದನು. ತನ್ನ ನಿಮಂತ್ರಕನ ಮನೆಯನ್ನು ತಲಪುತ್ತಲೇ ಅವನಿಗೆ ಕೇಳಿಸಿದ್ದೇನೆಂದರೆ— "ನನ್ನನ್ನಿಂದು ಕ್ಷಮಿಸಿರಿ. ಇಂದು ನಾನು ತಮ್ಮನ್ನು ಸ್ವಾಗತಿಸಲು ಸಾಧ್ಯವಿಲ್ಲ. ತಾವು ಮನೆಗೆ ಹೊರಳಿ ಹೋಗಿರೆಂದು ತಮ್ಮಲ್ಲಿ ನನ್ನ ಪ್ರಾರ್ಥನೆಯಿದೆ. ತಮ್ಮ ಮೇಲೆ ಪರಮಾತ್ಮನ ದಯೆಯಿರಲಿ."

ಅಬುಉಸ್ಮಾನನು ತನ್ನ ಮನೆಗೆ ಮರಳಿದನು. ಮನೆಯನ್ನು ತಲಪುವ ಹೊತ್ತಿಗೇ ಅವನ ಮಿತ್ರನು ಅವನಿಗೆ ಆಮಂತ್ರಣ ಕೊಡುವುದಕ್ಕೆ ಮತ್ತೆ ಬಂದನು.

ಅಬುಉಸ್ಮಾನನು ತನ್ನ ಮಿತ್ರನನ್ನು ಹಿಂಬಾಲಿಸಿ ಹೊರಟನು. ಅವರ ಮನೆಯ ಬಾಗಿಲಿಗೆ ತಲಪಿದ ಕೂಡಲೇ ಮಿತ್ರನು ಅವನಿಗೆ ಪುನಃ ಅಂದಿನ ದಿನದ ಸಲುವಾಗಿ ಕ್ಷಮೆ ಕೇಳಿದನು. ಅಬುಉಸ್ಮಾನನು ಪಿಟ್ಟೆನ್ನದೆ ಮತ್ತೆ ಹೊರಳಿ ಹೋದನು.

ಮೂರನೇ ಸಾರೆ ನಾಲ್ಕನೇ ಸಾರೆ ಸಹ ಅದೇ ಕ್ರಮವು ಮತ್ತೆಮತ್ತೆ ನಡೆಯಿತು. ಆದರೆ ಕೊನೆಯಲ್ಲಿ ಅವನ ಮಿತ್ರನು ಅವನನ್ನು ಸ್ವಾಗತಿಸಿದನು. ಹಾಗೂ ಎಲ್ಲ ಜನರ ಎದುರಿನಲ್ಲಿ ಅವನಿಗೆ ಹೇಳಿದ್ದೇನಂದರೆ—"ನಿಮ್ಮ ಸ್ವಭಾವದ ಪರೀಕ್ಷೆಯಾಗಿಬಿಡಲೆಂದು ನಾನು ನಿಮ್ಮೊಡನೆ ಹೀಗೆ ವರ್ತಿಸಿದೆನು. ನಿಮ್ಮ ಧೈರ್ಯ ಹಾಗೂ ನಮ್ರತೆಗಳನ್ನು ನಾನು ಪ್ರಶಂಸಿಸುತ್ತೇನೆ."

ಅಬುಉಸ್ಮಾನನು ಮರುನುಡಿದುದೇನಂದರೆ— "ನನ್ನನ್ನು ಪ್ರಶಂಸಿಸಬೇಡಿರಿ. ಯಾಕಂದರೆ ಈ ಗುಣಗಳು ನಾಯಿಯಲ್ಲಿ ಸಹ ಇರುತ್ತವೆ. ಅದು ಕರೆದಾಗ ಹತ್ತಿರಕ್ಕೆ ಬರುತ್ತದೆ. ಹೀಗಳಿದರೆ ಹೊರಳಿ ಹೋಗುತ್ತದೆ."

ಅಬುಉಸ್ಮಾನನು ಮನುಷ್ಯನು. ನಾಯಿ ಅಲ್ಲ. ಅವನು ನ್ಯಾಯವನ್ನೂ ಆತ್ಮತುಷ್ಟಿಯನ್ನೂ ಆಶಿಸದೆ ತನ್ನ ಸಂತೋಷದ ಅವಹೇಲನ ಮಾಡಿದನು.



*2

ಹಾಗೂ ಮಿತ್ರನ ನಗೆಗೆ ಕಾರಣವಾದನು. ಇದರಿಂದ ಯಾರಿಗೂ ಯಾವ ಲಾಭವೂ ಆಗಲಿಲ್ಲ.

ಇಂಥ ನಮ್ರಸ್ವಭಾವದ ಮನುಷ್ಯನ ಒಳಗೆ, ವಶದಲ್ಲಿ ತಂದುಕೊಳ್ಳ ಬಹುದಾದುದು ಯಾವುದೂ ಇರುವದಿಲ್ಲವೇ? ಇರುತ್ತದೆ. ಅವನ್ನು ವಶದಲ್ಲಿ ತಂದುಕೊಳ್ಳುವುದು ಎಲ್ಲಕ್ಕಿಂತ ಬಿಗಿಯಾಗಿದೆ. ಅದೇ ಅವನ ಸ್ವಭಾವದ ದುರ್ಬಲತೆ. ತನ್ನನ್ನು ತಾನು ನಡೆಸಿಕೊಳ್ಳಲು ಅವನು ಸ್ವತಃ ಅಸಮರ್ಥ ನಾಗಿದ್ದನು. ಅಂತೆಯೇ ಪ್ರತಿಯೊಬ್ಬರು ಅವನನ್ನು ತಮ್ಮಿಚ್ಛೆಗೆ ತಕ್ಕಂತೆ ನಡೆಸಿಕೊಳ್ಳುತ್ತಿದ್ದರು.

* * * *

ಒಬ್ಬ ನವಯುವಕನಾದ ಬ್ರಹ್ಮಚಾರಿಯು ಬಹು ಚತುರನಾಗಿದ್ದನು. ಹಾಗೂ ಅವನು ಸ್ವತಃ ತನ್ನ ಈ ಗುಣಗಳನ್ನು ತಿಳಿದವನಾಗಿದ್ದನು. ಎಲ್ಲೆಲ್ಲಿಯೂ ತನ್ನ ಪ್ರಶಂಸೆಯುಂಟಾಗುವಂತೆ ತನ್ನ ಯೋಗ್ಯತೆಯನ್ನು ಹೆಚ್ಚು ಹೆಚ್ಚಾಗಿ ಬೆಳೆಸಿಕೊಳ್ಳಬೇಕೆಂದು ಅವನ ದೊಡ್ಡ ಇಚ್ಛೆಯಿತ್ತು. ಅದಕ್ಕಾಗಿ ಅವನು ಒಂದಾದ ಮೇಲೆ ಒಂದರಂತೆ ಅನೇಕ ದೇಶಗಳನ್ನು ಸಂಚರಿಸಿದನು.

ಬಾಣ ಮಾಡಬಲ್ಲವನೊಬ್ಬನಲ್ಲಿಗೆ ಹೋಗಿ ಅವನು ಬಾಣ ಮಾಡಲು ಕಲಿತುಕೊಂಡನು.

ತುಸುದೂರ ಮುಂದರಿದು ಅವನು ನಾವೆ ಕಟ್ಟಲಿಕ್ಕೂ ದೋಣಿ ನಡಿಸ ಲಿಕ್ಕೂ ಕಲಿತನು.

ಒಂದು ಕಡೆ ಅವನು ಮನೆ ಕಟ್ಟುವ ವಿದ್ಯೆ ಕಲಿತನು.

ಈ ಬಗೆಯಾಗಿ ಅವನು ಹದಿನಾಲು ದೇಶಗಳನ್ನು ಸುತ್ತಾಡಿ ಮರಳಿ ಮನೆಗೆ ಬಂದನು. ಬಹು ಹೆಮ್ಮೆಯಿಂದ ಹೇಳತೊಡಗಿದ್ದೇನೆಂದರೆ— ಈ ಪೃಥ್ವಿಯ ಮೇಲೆ ನನಗೆ ಸರಿಯಾದ ಚತುರನು ಇನ್ನು ಬೇರೆ ಯಾವನಿದ್ದಾನೆ?

ಒಂದುದಿನ ಬಗವಾನ್ ಬುದ್ಧರನ್ನು ಆ ಬ್ರಹ್ಮಚಾರಿಯು ಕಂಡನು. ಹಾಗೂ ಅವರಿಗೆ ಕೇಳಿಕೊಂಡಿದ್ದೇನಂದರೆ— "ಇಲ್ಲಿಯ ವರೆಗೆ ನಾನು ಕಲಿತ ಎಲ್ಲಕ್ಕಿಂತ ಹೆಚ್ಚು ಶ್ರೇಷ್ಠವಾದ ವಿದ್ಯೆಯನ್ನು ಹೇಳಿಕೊಡಬೇಕು." ಅವರು ಒಬ್ಬ ಮುಪ್ಪಿನ ಶ್ರಮಣನ ರೂಪವನ್ನು ಧರಿಸಿ ಆ ನವಯುವಕನ ಹತ್ತಿರ ಹೋದರು. ಶ್ರಮಣನ ಹತ್ತರ ಒಂದು ಭಿಕ್ಷಾಪಾತ್ರೆ ಇತ್ತು.

"ನೀವಾರು?" ಎಂದು ಬ್ರಹ್ಮಚಾರಿಯು ಪ್ರಶ್ನಿಸಿದನು.

"ನಾನು ನನ್ನ ಶರೀರವನ್ನು ವಶದಲ್ಲಿ ಇಟ್ಟುಕೊಳ್ಳಬಲ್ಲ ಒಬ್ಬ ಮನುಷ್ಯ."

"ಏನು ಹೇಳಬೇಕೆಂದು ನೀವು ಆಶಿಸುತ್ತೀರಿ?"

"ಒಬ್ಬ ಧನುರ್ವೇದಿಯು ಬಾಣ ಪ್ರಯೋಗಿಸಲು ಬಲ್ಲನು." ಬುದ್ಧದೇವರು ಉತ್ತರವಿತ್ತರು— "ಒಬ್ಬ ನಾವಿಕನು ನಾವೆ ನಡೆಸುತ್ತಾನೆ. ಒಬ್ಬ ಶಿಲ್ಪಿಯು ತನ್ನ ಮೇಲ್ವಿಚಾರಣೆಯಲ್ಲಿ ಮನೆ ಕಟ್ಟಿಕೊಳ್ಳುತ್ತಾನೆ. ಆದರೆ ಒಬ್ಬ ಜ್ಞಾನಿಯು ಸ್ವತಃ ತನ್ನ ಮೇಲೆ ತಾನು ಶಾಸನವನ್ನು ನಡೆಸುತ್ತಾನೆ."

"ಯಾವ ಪ್ರಕಾರ?"

"ಯಾರಾದರೂ ತನ್ನನ್ನು ಪ್ರಶಂಸಿಸಿದರೆ ಅವನ ಮನಸ್ಸು ಚಂಚಲವಾಗುವದಿಲ್ಲ. ಯಾರಾದರೂ ತನ್ನನ್ನು ನಿಂದಿಸಿದರೆ ಅವನ ಮನಸ್ಸು ಸ್ಥಿರವಾಗಿ ಉಳಿಯುತ್ತದೆ. ಅವನು ಸರ್ವರಿಗೂ ಹಿತವಾಗುವ ಮಹಾನಿಯಮಗಳನ್ನು ಅನುಸರಿಸಿ ಕಾರ್ಯ ಮಾಡುತ್ತಾನೆ. ಈ ಪ್ರಕಾರ ಅವನು ಯಾವಾಗಲೂ ಶಾಂತಿಯಲ್ಲಿ ನೆಲೆಸುತ್ತಾನೆ."

ಒಳ್ಳೇದು. ಮಕ್ಕಳೇ, ನಿಮ್ಮನ್ನು ನೀವು ಆಳಲು ಕಲಿತುಕೊಳ್ಳಿರಿ. ನಿಮ್ಮ ಸ್ವಭಾವವನ್ನು ವಶಗೊಳಿಸಿಕೊಳ್ಳುವುದಕ್ಕಾಗಿ ನೀವು ಕಠೋರವಾದ ಕಡಿವಾಣವನ್ನು ಹಾಕಿಕೊಳ್ಳುವ ಆವಶ್ಯಕತೆಯೆನಿಸಿದರೆ ದೂರಿ ಕೊಳ್ಳುವುದನ್ನು ಬಿಟ್ಟುಬಿಡಿರಿ.

ಒಂದು ಚಂಚಲವಾದ ಹರೆಯದ ಕುದುರೆಯು ಬರಬರುತ್ತ ಈಲವಾಗಿ ಬಿಡುವದು. ಅದು ಒಂದು ಕಟ್ಟಿಗೆಯ ಮೂಕ ಕುದುರೆಗಿಂತ ಎಷ್ಟೋ ಒಳ್ಳೆ ಯದು. ಅದು ತನ್ನನ್ನು ಮಾಡಿ ನಿಲ್ಲಿಸಿದಂತೆಯೇ ಯಾವಾಗಲೂ ಇರುತ್ತದೆ. ಅದಕ್ಕೆ ನಗೆಚಾಟಿಕೆಯ ಸಲುವಾಗಿ ಮಾತ್ರ ಕಡಿವಾಣವನ್ನು ಏರಿಸ ಲಾಗುತ್ತದೆ.



# ಸಾಹಸ

ನೀವು ನೀರಿನಲ್ಲಿ ಹಾರಿಕೊಳ್ಳುತ್ತೀರಿ. ಆ ವಿಪುಲವಾದ ಜಲರಾಶಿಯು ನಿಮ್ಮನ್ನು ಹೆದರಿಸುವುದಿಲ್ಲ. ನೀವು ಕೈಕಾಲುಗಳನ್ನು ಬಡಿಯುತ್ತೀರಿ. ಅವರೊಡನೆಯೇ ಈಸಕಲಿಸಿದ ನಿಮ್ಮ ಗುರುವಿಗೆ ಧನ್ಯವಾದಗಳನ್ನು ಅರ್ಪಿಸುತ್ತೀರಿ. ನೀವು ತೆರೆಗಳ ಮೇಲೆ ಅಧಿಕಾರವನ್ನು ನಡೆಸುತ್ತೀರಿ. ಹಾಗೂ ಬದುಕಿಕೊಂಡು ಹೊರಬೀಳುತ್ತೀರಿ. ನೀವು ವೀರರಾಗುತ್ತೀರಿ.

ನೀವು ನಿದ್ರೆಹೋದಾಗ 'ಬೆಂಕಿ ಬೆಂಕಿ' ಎಂಬ ಮಾತು ಬೆಚ್ಚಿಬೀಳುವಂತೆ ಮಾಡಿತು. ನೀವು ಹಾಸಿಗೆಯೊಳಗಿಂದಲೇ ಕೂಗಿಕೊಳ್ಳುತ್ತೀರಿ. ಎದುರಿಗೆ ಬೆಂಕಿಯ ಕೆನ್ನಾಲಗೆಗಳು ಕಾಣಿಸಿಕೊಳ್ಳುತ್ತವೆ. ನೀವು ಆ ಘಾತುಕವಾದ ಭಯದಿಂದ ತ್ರಸ್ತರಾಗುವದಿಲ್ಲ. ಹೊಗೆ, ಕಿಡಿ, ಜ್ವಾಲೆ ಇವುಗಳೊಳಗಿಂದ ನೀವು ಹೊರಟೆದ್ದು ಓಡುವಿರಿ. ಮತ್ತು ನಿಮ್ಮನ್ನು ನೀವು ಉಳಿಸಿಕೊಳ್ಳುತ್ತೀರಿ. ಇದು ಸಾಹಸದ ಕೆಲಸವು.

ಬಹಳ ದಿನಗಳ ಹಿಂದೆ ನಾನು ಇಂಗ್ಲಂಡಿನಲ್ಲಿ ಒಂದು ಮಕ್ಕಳ ಶಾಲೆಗೆ ಹೋಗಿದ್ದೆನು. ಅಲ್ಲಿ ಮೂರರಿಂದ ಏಳು ವರುಷಗಳ ವರೆಗಿನ ವಿದ್ಯಾರ್ಥಿಗಳಿದ್ದರು. ಆವರಲ್ಲಿ ಬಾಲಕರೂ ಇದ್ದರು. ಅವರೆಲ್ಲರೂ ನೇಯುವುದು,

ಚಿತ್ರ ತೆಗೆಯುವುದು, ಕಥೆ ಹೇಳುವುದು—ಕೇಳುವುದು, ಹಾಡುವುದು ಮೊದಲಾದವುಗಳಲ್ಲಿ ತೊಡಗಿದ್ದರು.

ಅವರ ಅಧ್ಯಾಪಕರು ನನಗೆ ಹೇಳಿದ್ದೇನೆಂದರೆ— "ನಾವು ಇನ್ನು ಬೆಂಕಿಯಿಂದ ಬದುಕಿಕೊಳ್ಳುವ ಅಭ್ಯಾಸವನ್ನು ಮಾಡುವೆವು. ಬೆಂಕಿಯು ಸತ್ಯಸತ್ಯವಾಗಿ ಹತ್ತಿಲ್ಲ. ಆದರೆ ಭಯದ ಲಕ್ಷಣ ಕಂಡರೆ ಯಾವ ಪ್ರಕಾರ ಲಗುಬಗೆಯಿಂದ ಎದ್ದು ಓಡಿಹೋಗತಕ್ಕದ್ದೆಂಬುದನ್ನು ಮಕ್ಕಳಿಗೆ ಕಲಿಸುವದಿದೆ"

ಅವರು ಸೀಟಿ ಊದಿದ ಕೂಡಲೇ ಮಕ್ಕಳು ತಮ್ಮತಮ್ಮ ಪುಸ್ತಕ ಪೇನ್ಸಿಲು, ಹೆಣೆಯುವ ದಾರ ಬಿಟ್ಟುಕೊಟ್ಟರು. ಹಾಗೂ ಎದ್ದುನಿಂತು ಕೊಂಡರು. ಇನ್ನೊಂದು ಸಂಕೇತದಂತೆ ಎಲ್ಲರೂ ಒಬ್ಬರ ಹಿಂದೆ ಒಬ್ಬರಾಗಿ ಹೊರಗೆ ಬಯಲಲ್ಲಿ ಬಂದುಬಿಟ್ಟರು. ಕೆಲವೇ ಕ್ಷಣಗಳಲ್ಲಿ ವರ್ಗಗಳೆಲ್ಲ ತೆರವಾಗಿಹೋದವು. ಆ ಚಿಕ್ಕಮಕ್ಕಳು ಬೆಂಕಿಯ ಹೆದರಿಕೆಯನ್ನು ಎದುರಿಸಲಿಕ್ಕೂ ಸಾಹಸಿಗಳಾಗಲಿಕ್ಕೂ ಕಲಿತರು.

ನೀವು ಯಾರ ಸಂರಕ್ಷಣೆಯ ಸಲುವಾಗಿ ಈಸುವಿರಿ? ನಮ್ಮ ಸಂರಕ್ಷಣೆಯ ಸಲುವಾಗಿ.

ನೀವು ಯಾರನ್ನು ಉಳಿಸುವದಕ್ಕಾಗಿ ಬೆಂಕಿಯ ಜ್ವಾಲೆಗಳೊಳಗಿಂದ ಹೊರಬಿದ್ದಿರಿ? ನಮ್ಮನ್ನು ನಾವು ಉಳಿಸಿಕೊಳ್ಳುವ ಸಲುವಾಗಿ.

ಮಕ್ಕಳೇ, ಯಾರನ್ನು ಕಾಪಾಡುವದಕ್ಕಾಗಿ ಬೆಂಕಿಯ ಹೆದರಿಕೆಯನ್ನು ಎದುರಿಸಿದಿರಿ? ನಮ್ಮ ಸಂರಕ್ಷಣೆಯ ಸಲುವಾಗಿ.

ಪ್ರತಿಯೊಂದು ಪ್ರಸಂಗದಲ್ಲಿ ಸಾಹಸದ ಪ್ರದರ್ಶನವನ್ನು ನಮ್ಮ ಸಂರಕ್ಷಣೆಗಾಗಿ ಮಾಡಲಾಯಿತು. ಇದೇನು ಅನುಚಿತವೇ? ಎಷ್ಟೂ ಇಲ್ಲ.

ಜೀವನವನ್ನು ಸಂರಕ್ಷಿಸುವುದೂ ಅದನ್ನು ಉಳಿಸಿಕೊಳ್ಳಲು ಹೀರಗುರಾವುದೂ ಸರ್ವಥಾ ಉಚಿತವಾಗಿದೆ. ಆದರೆ ಒಂದು ವೀರತನವು ಇದಕ್ಕೂ ಹಿರಿದಾಗಿದೆ. ಯಾವುದು ಹೆರರನ್ನು ಸಂರಕ್ಷಿಸುವುದಕ್ಕಾಗಿ ಕಾರ್ಯರೂಪದಲ್ಲಿ ತರಲಾಗುವುದೋ ಅದೇ ವೀರತನ.

ನಾನು ನಿನಗೆ ಮಾಧವನ ಆ ಕಥೆಯನ್ನು ಹೇಳುತ್ತೇನೆ. ಅದನ್ನು ಭವಭೂತಿಯು ಬರೆದಿದ್ದಾನೆ. ಮಾಧವನು ದೇವಾಲಯದ ಹೊರಗಡೆಯಲ್ಲಿ ಚಪಗಾಲು ಹಾಕಿಕೊಂಡು ಕುಳಿತಿದ್ದನು. ಆಗ ಅವನು ದುಃಖಪೂರ್ಣವಾದ ಒಂದು ಸ್ವರವನ್ನು ಕೇಳಿದನು.

ಒಳಗೆ ಹೋಗುವುದಕ್ಕೆ ಅವನು ಒಂದು ದಾರಿಯನ್ನು ಕಂಡುಕೊಂಡನು. ಹಾಗೂ ಚಾಮುಂಡೇಶ್ವರೀದೇವಿಯ ಗರ್ಭಗುಡಿಯಲ್ಲಿ ಅವನು ಇಣಿಕಿ ನೋಡಿದನು.

ಭಯಂಕರಳಾದ ಆ ದೇವಿಗೆ ಬಲಿಕೊಡುವ ಸಲುವಾಗಿ ಒಬ್ಬ ಬಾಲಿಕೆಯನ್ನು ಅಲ್ಲಿ ಅಣಿಗೊಳಿಸಿದ್ದರು. ಅವಳು ನಿರ್ಗತಿಕಳಾದ ಮಾಲತಿ. ಆ ಯುವತಿಯನ್ನು ಸುಪ್ತಾವಸ್ಥೆಯಲ್ಲಿಯೇ ಅಲ್ಲಿಗೆ ತರಲಾಗಿತ್ತು. ಅಲ್ಲಿ ಪೂಜಾರಿ ಹಾಗೂ ಪೂಜಾರತಿಯ ಹತ್ತಿರ ಅವಳು ಒಬ್ಬೊಂಟಿಗಳಾಗಿದ್ದಳು. ಪೂಜಾರಿಯು ತನ್ನ ಚೂರಿಯನ್ನು ಮೇಲಕ್ಕೆತ್ತಿದ ಹೊತ್ತಿಗೆ ಅವಳು ತನ್ನ ಪ್ರೇಮಿಯಾದ ಮಾಧವನನ್ನು ಧ್ಯಾನಿಸುತ್ತಿದ್ದಳು. “ಮಾಧವಾ, ಹೃದಯೇಶ್ವರಾ, ನಾನು ಪ್ರಾರ್ಥಿಸುವದೇನಂದರೆ—ನನ್ನ ಮರಣವಾದ ಬಳಿಕ ಸಹ ನಿನ್ನ ನೆನಹಿನಲ್ಲಿ ಉಳಿಯಬಲ್ಲೆನು. ಯಾವ ಪ್ರೇಮವು ನನ್ನ ಹಿರಿದಾದ ಹಾಗೂ ಸವಿಯಾದ ನೆನಹಿನಲ್ಲಿ ಸುರಕ್ಷಿತವಾಗಿರುತ್ತದೆಯೋ ಅದು ಮರಣ ಹೊಂದುವದಿಲ.”

ವೀರಮಾಧವನು ಒಮ್ಮೆ ಅಬ್ಬರಿಸಿ ಆ ಬಲಿಗೃಹವನ್ನು ನುಗ್ಗಿದನು. ಪೂಜಾರಿಯೊಡನೆ ಆತನು ಘೋರಯುದ್ಧ ನಡೆಸಿದನು. ಮಾಲತಿಯನ್ನು ಉಳಿಸಿಕೊಂಡನು.

ಮಾಧವನು ಆ ಸಾಹಸದ ಪ್ರಯೋಗವನ್ನು ಯಾರ ಸಲುವಾಗಿ ಮಾಡಿದನು? ಅವನು ಸ್ವಂತದ ಸಲುವಾಗಿ ಕಾದಾಡಿದನೇ? ಹಾಗಾದರೆ ಅವನ ಸಾಹಸಕ್ಕೆ ಕೇವಲ ಇದೇ ಕಾರಣವಿರಲಿಲ್ಲ. ಅವನು ಹೆರವರನ್ನು ಕಾಪಾಡುವ ಸಲುವಾಗಿಯೂ ಕಾದಾಡಿದನು. ಅವನು ಒಬ್ಬ ದುಃಖಿಯ ಆರ್ತಸ್ವರವನ್ನು ಕೇಳಿದನು. ಅದು ಅವನ ವೀರಹೃದಯಕ್ಕೆ ನೇರವಾಗಿ ಹೋಗಿ ತಲಪಿತು.

ನೀವು ಒಂದಿಷ್ಟು ಯೋಚಿಸಿದರೆ ಈ ಪ್ರಕಾರದ ಕಣ್ಣಾರೆ ಕಂಡ ಅನೇಕಷ್ಟೋ ಘಟನೆಗಳು ನಿಮಗೆ ನೆನಪಾಗುವವು. ಯಾವ ಬಗೆಯಿಂದ ಒಬ್ಬ ವ್ಯಕ್ತಿಯು ಭಯದ ಲಕ್ಷಣವನ್ನು ಕಾಣುತ್ತಲೇ ಬೇರೊಬ್ಬ ಪುರುಷನಿಗಾಗಲಿ ಸ್ತ್ರೀಯಳಿಗಾಗಲಿ ಮಗುವಿಗಾಗಲಿ ಸಹಾಯ ನೀಡುವ ಸಲುವಾಗಿ ಅವು ಹೇಗೆ ಮುಂದುವರಿದು ಹೋಗುತ್ತಾನೆಂಬುದನ್ನು ನೀವು ನಿಶ್ಚಯವಾಗಿಯೂ ನೋಡಬಹುದು.

ನೀವು ವೃತ್ತಪತ್ರಗಳಲ್ಲಿ ಇಲ್ಲವೆ ಕಥೆಗಳಲ್ಲಿ ಸಹ ಈ ಪ್ರಕಾರದ ಸಾಹಸಪೂರ್ಣವಾದ ಘಟನೆಗಳ ಬಗೆಗೆ ತಪ್ಪದೆ ಓದುವಿರಿ. ನೀವು ಮತ್ತಾವ ಮಾತನ್ನು ಕೇಳುವಿರೆಂದರೆ—ಬೆಂಕಿ ನಂದಿಸುವವರು ಜ್ವಾಲೆಗಳಿಗೆ ತುತ್ತಾದ ಮನೆಯ ಜನರನ್ನು ಅದು ಹೇಗೆ ಉಳಿಸಿಕೊಳ್ಳುತ್ತಾರೆ, ಕಣಿಗಳಲ್ಲಿ ಕೆಲಸ ಮಾಡುವವರು ಆಳವಾದ ತಗ್ಗಿನಲ್ಲಿಳಿದು ತನ್ನ ಸಂಗಡಿಗರನ್ನು ನೀರು, ಬೆಂಕಿ ಹಾಗೂ ಉಸಿರುಗಟ್ಟಿಸುವ ವಾಯು ಇವುಗಳಿಂದ ಬದುಕಿಸುವ ಸಲುವಾಗಿ ಅವು ಹೇಗೆ ಹೊರತೆಗೆಯುತ್ತಾರೆ, ಭೂಕಂಪದಿಂದ ನಡುಗುವ

ಮನೆಗಳೊಳಗಿಂದ ಮನೆಯ ಗೋಡೆಗಳು ಕುಪ್ಪಳಿಸುವ ಅಂಜಿಕೆಯಿದ್ದರೂ ಜನರು ದುರ್ಬಲ ವ್ಯಕ್ತಿಗಳನ್ನು ಹೊರಗೆ ತರುವ ಸಾಹಸವನ್ನು ಹೇಗೆ ಮಾಡುತ್ತಾರೆ. ಇಲ್ಲವಾದರೆ ಅವರು ದಬ್ಬುಗೆಯ ಕೆಳಗೆ ನುಜ್ಜಾಗಿ ಹೇಗೆ ಸತ್ತುಹೋಗುತ್ತಾರೆ. ನಾಗರಿಕರು ತಮ್ಮ ನಗರವನ್ನು ಅಥವಾ ಮಾತೃ ಭೂಮಿಯನ್ನು ಕಾಪಾಡಲು ಶತ್ರುಗಳನ್ನು ಅದೆಂತು ಎದುರಿಸುತ್ತಾರೆ. ಹಸಿವು ನೀರಡಿಕೆಗಳನ್ನು ಹೇಗೆ ತಾಳಿಕೊಳ್ಳುತ್ತಾರೆ. ಗಾಯಾಳು ಸಹ ಹೇಗೆ ಆಗಿಬಿಡುತ್ತಾರೆ.

ಈ ಬಗೆಯಾಗಿ ನಾವು ಎರಡು ಪ್ರಕಾರದ ಸಾಹಸವನ್ನು ಕಂಡೆವು. ತಮ್ಮ ಸಹಾಯದ ಸಲುವಾಗಿ ಕಾರ್ಯರೂಪದಲ್ಲಿ ತರಲಾಗುವ ಸಾಹಸವು ಒಂದಾದರೆ, ಇನ್ನೊಂದು ಹೆರವರ ಸಹಾಯದ ಸಲುವಾಗಿ ಮಾಡಿದ ಸಾಹಸ.

ನಾನು ನಿಮಗೆ ವೀರ ವಿಭೀಷಣನ ಕಥೆಯನ್ನು ಹೇಳುತ್ತೇನೆ. ಅವನು ಒಂದು ಅದೆಂಥ ಗಂಡಾಂತರವನ್ನು ಎದುರಿಸಿದನೆಂದರೆ— ಅದು ಮೃತ್ಯುವಿನ ಗಂಡಾಂತರಕ್ಕಿಂತಲೂ ಭಯಾನಕವಾಗಿತ್ತು. ಅವನು ಒಬ್ಬ ರಾಜನ ಸಿಟ್ಟನ್ನು ಎದುರಿಸಿದನು. ಹಾಗೂ ಅವನು ಆತನಿಗೆ ಬುದ್ಧಿವಂತಿಕೆಯ ಒಂದು ಸಲಹೆಯನ್ನು ಕೊಟ್ಟನು. ಹಾಗೆ ಮಾಡುವ ಸಾಹಸವು ಇನ್ನಾರಿಂದಲೂ ಆಗಿರಲಿಲ್ಲ.

ಲಂಕೆಯ ರಾಕ್ಷಸರಾಜನು ಹತ್ತು ತಲೆಯ ರಾವಣನೆಂದು ಹೆಸರಾಗಿದ್ದನು. ಅವನು ಶ್ರೀ ಸೀತಾಮಾತೆಯನ್ನು ತನ್ನ ರಥದಲ್ಲಿ ಕುಳ್ಳಿರಿಸಿಕೊಂಡು ಅವಳ ಪತಿಯಿಂದ ದೂರವಾದ ಲಂಕಾದ್ವೀಪದಲ್ಲಿದ್ದ ತನ್ನ ಅರಮನೆಗೆ ತೆಗೆದುಕೊಂಡು ಹೋಗಿದ್ದನು. ಯಾವ ಅರಮನೆಯಲ್ಲಿ ಮತ್ತು ಯಾವ ಹೂದೋಟದಲ್ಲಿ ರಾಜಕುಮಾರಿಯಾದ ಸೀತಾಮಾತೆಯನ್ನು ಬಂಧಿಸಿಟ್ಟಿದ್ದನೋ ಅದು ಬಹು ವಿಶಾಲವೂ ಮೋಹಕವೂ ಆಗಿತ್ತು. ಆದರೇನು? ಅವಳು ದುಃಖಿಯಾಗಿದ್ದಳು. ಅವಳು ಹಗಲೂ ಇರುಳೂ ಅಳುತ್ತಿದ್ದಳು. ತನ್ನ ಸ್ವಾಮಿ

ಯಾವ ರಾಮನನ್ನು ಪುನಃ ನೋಡುವೆನೋ ಇಲ್ಲವೋ ಎಂಬ ವಿಶ್ವಾಸವೂ ಅವಳಿಗಿದ್ದಿಲ್ಲ.

ಯಶಸ್ವಿಯಾದ ರಾಮನಿಗೆ ವಾನರ ರಾಜನಾದ ಹನುಮಂತನಿಂದ ತನ್ನ ಸತಿಯನ್ನು ಯಾವ ಸ್ಥಳದಲ್ಲಿ ಬಂಧಿಸಿಡಲಾಗಿದೆಯೆಂಬ ಶೋಧವು ತಿಳಿದುಬಂದಿತು. ಅವನು ತನ್ನ ಸುಶೀಲ ಬಂಧುವಾದ ಲಕ್ಷ್ಮಣ ಹಾಗೂ ಉಳಿದ ವೀರರ ಒಂದು ದೊಡ್ಡ ಸೇನೆಯನ್ನು ತೆಗೆದುಕೊಂಡು ಬಂಧಿನಿಯಾದ-ಸೀತಾಮಾತೆಯ ನೆರವಿಗೆ ನಡೆದನು.

ರಾಕ್ಷಸರಾಜನಾದ ರಾವಣನಿಗೆ ರಾಮನು ಬರುವನೆಂಬ ಸಮಾಚಾರವು ತಿಳಿದುಬರಲು ಅವನು ಅಂಜಿಸತ್ತು ನಡುಗಹತ್ತಿದನು.

ಆಗ ಅವನಿಗೆ ಎರಡು ಪ್ರಕಾರದ ಸಲಹೆಗಳು ದೊರೆತವು. ಅವನ ಓಲಗದ ಒಂದು ಗುಂಪಿನವರು ಅವನ ಸಿಂಹಾಸನದ ಸುತ್ತುಮುತ್ತು ನೆರೆದು ಹೇಳತೊಡಗಿದ್ದೇನಂದರೆ— " ಎಲ್ಲವೂ ಚೆನ್ನಾಗಿದೆ. ಮಹಾ ದೊರೆಗಳೇ ! ಅಂಜುವಂಥದೇನೂ ಇಲ್ಲ. ದೇವತೆಗಳು ಅಸುರರು ಎನ್ನದೆ ಇಬ್ಬರನ್ನೂ ನೀವು ಗೆದ್ದುಕೊಂಡಿರುತ್ತೀರಿ. ರಾಮ ಹಾಗೂ ಅವನ ಸಂಗಡಿಗನಾದ ಹನುಮಂತನ ಕಪಿಗಳನ್ನು ಗೆಲ್ಲುವುದು ಕಠಿಣವೇನಲ್ಲ. "

ಈ ಮಾತಿನ ಬೂಟಾಳರು ರಾಜನ ಬಳಿಯಿಂದ ಕದಲುತ್ತಲೇ ಅವನ ಬಂಧುವಾದ ವಿಭೀಷಣನು ಅಲ್ಲಿಗೆ ಬಂದನು. ಹಾಗೂ ಅವನ ಮುಂದೆ ಮಂಡೆಗಾಲೂರಿ ಅವನ ಕಾಲಿಗೆ ಬಿದ್ದನು. ಬಳಿಕ ಎದ್ದು ಆ ಸಿಂಹಾಸನದ ಎಡಮಗ್ಗುಲಲ್ಲಿ ಕುಳಿತುಕೊಂಡು ಹೇಳಿದ್ದೇನೆಂದರೆ– " ನನ್ನಣ್ಣನೇ, ನೀನು ಸುಖದಿಂದ ಇರಬೇಕೆನ್ನುತ್ತಿದ್ದರೆ ಈ ಲಂಕೆಯಂಥ ಸುಂದರ ದ್ವೀಪದ ಸಿಂಹಾಸನವನ್ನು ಸಂರಕ್ಷಿಸಬೇಕೆನ್ನುತ್ತಿದ್ದರೆ ಚೆಲುವೆಯಾದ ಸೀತಾದೇವಿಯನ್ನು ಮರಳಿ ಕೊಡು. ಯಾಕಂದರೆ ಅವಳು ಹೆರವರ ಹೆಂಡತಿ. ರಾಮನ ಬಳಿಗೆ ಹೋಗು. ಅವನಿಗೆ ಕ್ಷಮೆ ಕೇಳಿಕೋ. ಅವನು ನಿನ್ನನ್ನು ನಿರಾಶಗೊಳಿಸಲಾರನು. ಇಷ್ಟೊಂದು ದುಸ್ಸಾಹಸಿಯೂ ಅಭಿಮಾನಿಯೂ ಆಗಬೇಡ. "

ಇನ್ನೊಬ್ಬ ಬುದ್ಧಿಶಾಲಿ ವ್ಯಕ್ತಿಯಾದ ಮಲಯಾವನನು ಈ ಮಾತು ಕೇಳಿ ಸಂತುಷ್ಟನಾದನು. ಅವನು ರಾಕ್ಷಸರಾಜನಿಗೆ ಆಗ್ರಹಪೂರ್ವಕವಾಗಿ ಹೇಳಿದ್ದೇನೆಂದರೆ— "ನಿನ್ನ ತಮ್ಮನ ಮಾತನ್ನು ವಿಚಾರಿಸು. ಯಾಕೆಂದರೆ ಅದು ಸತ್ಯವನ್ನು ಉಸುರಿದೆ."

"ನೀವಿಷ್ಟರೂ ದುರುದ್ದೇಶದವರಾಗಿರುವಿರಿ" ಎಂದು ರಾಜನು ಮರು ನುಡಿದು "ಯಾಕೆಂದರೆ ನೀವು ನನ್ನ ಶತ್ರುವಿನ ಪಕ್ಷ ಕಟ್ಟುತ್ತೀರಿ."

ಆ ಹತ್ತು ತಲೆಯುವನ ಕಣ್ಣುಗಳಿಂದ ಸಿಟ್ಟಿನ ಕಿಡಿಗಳು ಅವೆಷ್ಟು ಹೊರಬೀಳಹತ್ತಿದವೆಂದರೆ– ಮಲಯಾವನನಂತೂ ಅಂಜಿ ಕೋಣೆಬಿಟ್ಟು ಓಡಿ ಹೋದನು. ಆದರೆ ವಿಭೀಷಣನು ತನ್ನ ಆತ್ಮಬಲದಿಂದ ಅಲ್ಲಿಯೇ ಸ್ಥಿರವಾಗಿ ಕುಳಿತುಬಿಟ್ಟು – "ಸ್ವಾಮಿಾ, ಪ್ರತಿ ಒಬ್ಬ ಮನುಷ್ಯನ ಹೃದಯದಲ್ಲಿ ವಿವೇಕ ಹಾಗೂ ಅವಿವೇಕ ಇವೆರಡೂ ನೆಲೆಸಿರುತ್ತವೆ. ಯಾರ ಹೃದಯದಲ್ಲಿ ಹೆಚ್ಚು ವಿವೇಕವಿರುವದೋ ಅವರ ಜೀವನವು ಸುಖಕರವಾಗಿರುತ್ತದೆ. ಅಲ್ಲಿ ಅವಿವೇಕದ ರಾಜ್ಯವಿದ್ದರೆ ಕೇಳುವುದೇನು? ದುಃಖವೇ ದುಃಖ. ಅಣ್ಣಾ, ನಿನ್ನ ಹೃದಯದಲ್ಲಿ ಅವಿವೇಕವು ಮನೆಮಾಡಿದೆಯೆಂಬ ಅಂಜಿಕೆ ನನಗಿದೆ. ಯಾಕೆಂದರೆ ನಿನ್ನನ್ನು ಬೂಟಾಟಿಕೆಯಿಂದ ಹೊಗಳುವವರ ಮಾತಿಗೆ ನೀನು ಕಿವಿಗೊಡುತ್ತೀ. ಅವರು ನಿನಗೆ ನಿಜವಾದ ಮಿತ್ರರಾಗಲಾರರು."

ಇಷ್ಟು ನುಡಿದು ಆತನು ನಿಶ್ಶಬ್ದನಾದನು. ಮತ್ತು ಅವನು ರಾಜನ ಪಾದಗಳಿಗೆ ಮತ್ತೊಮ್ಮೆ ಎರಗಿದನು.

ರಾವಣನು ಅಬ್ಬರಿಸಿದನು — "ದುಷ್ಟಾ, ನೀನು ಸಹ ಶತ್ರುಗಳೊಳಗಿನವನೇ ಆಗಿರುವಿ. ಸಾಕು. ಇಂಥ ಮೂರ್ಖತನದ ಮಾತುಗಳನ್ನು ಇನ್ನೊಮ್ಮೆ ನುಡಿಯದಿರು. ಇಂಥ ಮಾತುಗಳನ್ನು ನೀನು ಅರಣ್ಯವಾಸಿಗಳಾದ ಸಾಧು-ಸನ್ಯಾಸಿಗಳ ಹತ್ತಿರ ಹೋಗಿ ಹೇಳು. ಯಾವ ಶತ್ರುವಿನೊಡನೆ ಯುದ್ಧ ಮಾಡಿದರೂ ಯಾವನು ಗೆಲುವನ್ನೆ ಪಡೆದಿರುವನೋ ಅವನ ಮುಂದೆ ಮಾತು

ಬೇಡ." ಹೀಗೆ ನುಡಿಯುತ್ತ ಅವನು ತನ್ನ ವೀರ ಬಂಧುವಾದ ವಿಭೀಷಣ ನಿಗೆ ಒಂದು ಏಟು ಕೊಟ್ಟುಬಿಟ್ಟನು.

ಮನದಲ್ಲಿ ವ್ಯಥಿತನಾಗಿ ವಿಭೀಷಣನು ಎದ್ದು ಕುಳಿತನು. ಹಾಗೂ ರಾಜಮಂದಿರವನ್ನು ಬಿಟ್ಟುಕೊಟ್ಟು ಹೊರಟು ಹೋದನು.

ತುಸು ಸಹ ಮನದಲ್ಲಿ ಅಂಜಿಕೊಳ್ಳದೆ ಅವನು ಏನೆಲ್ಲವನ್ನು ರಾವಣನಿಗೆ ಖಂಡತುಂಡವಾಗಿ ಹೇಳಿದನು. ಹಾಗೂ ಆ ಹತ್ತು ತಲೆಯುವನು ಅವನ ಮಾತು ಕೇಳಲಿಚ್ಛಿಸದಿದ್ದರೆ ಅವನು ಹೊರಟುಹೋಗುವ ಹೊರತು ಇನ್ನೇನು ಮಾಡಬಲ್ಲನು ?

ವಿಭೀಷಣನ ಈ ಕಾರ್ಯವು ಶಾರೀರಿಕ ಸಾಹಸದ ಕಾರ್ಯ. ಯಾಕೆಂದರೆ ಅವನು ತನ್ನ ಅಣ್ಣನ ಪೆಟ್ಟಿಗೆ ಅಂಜಲಿಲ್ಲ. ಅದೊಂದು ಆತ್ಮನಿರ್ಭಯತೆಯ ಕಾರ್ಯವೂ ಆಗಿತ್ತು. ಅದೆಷ್ಟೋ ಶಾರೀರಿಕ ಬಲವಿದ್ದರೂ ರಾಜಾಸ್ಥಾನ ದೊಳಗಿನ ಇನ್ನಾರ ಬಾಯಿಂದಲೂ ಆ ಮಾತುಗಳು ಹೊರಬಿದ್ದಿರಲಿಲ್ಲ. ಆತನಾದರೋ ರಾಜನಿಗೆ ಹೇಳಲಿಕ್ಕೆ ಸ್ವಲ್ಪವೂ ಸಂಕೋಚಪಡಲಿಲ್ಲ. ಇದು ಮನಸ್ಸಿನ ಸಾಹಸವಾಗಿದೆ. ಇದಕ್ಕೆ ನಾವು ನೈತಿಕ ಬಲವೆನ್ನುತ್ತೇವೆ.

ಇಂಥ ಸಾಹಸವು ಇಜರಾಯಿಲದ ಮುಂದಾಳುವಾದ ಮೂಸಾನಲ್ಲಿಯೂ ಇತ್ತು. ಪೀಡಿತರಾದ ಯಹೂದಿ ಜನರನ್ನು ಸ್ವತಂತ್ರಗೊಳಿಸಿ ಬಿಡುಯೆಂದು ಅವನು ಮಿಶ್ರ ದೇಶದ ರಾಜನಾದ ಫಾರೋನಿಗೆ ಕೇಳಿಕೊಂಡಿದ್ದನು.

ಇದೇ ಸಾಹಸವು ಪೈಗಂಬರ ಮುಹಮ್ಮದನಲ್ಲಿಯೂ ಇತ್ತು. ಅದರಿಂದ ಅವನು ತನ್ನ ಧಾರ್ಮಿಕ ವಿಚಾರಗಳನ್ನು ಅರಬಿ ನಿವಾಸಿಗಳಲ್ಲಿ ಪ್ರಸಾರ ಗೊಳಿಸಿದನು. ಆ ಜನರು ಮರಣಭಯವನ್ನು ತೋರಿಸಿದರೂ ಅವನು ತೆಪ್ಪಗಿರುವುದಕ್ಕೆ ಒಪ್ಪಿಕೊಳ್ಳಲಿಲ್ಲ.

ಗೌತಮ ಬುದ್ಧನಲ್ಲಿಯೂ ಇಂಥ ಸಾಹಸವೇ ಇತ್ತು. ಅವನು ಭಾರತ ವಾಸಿಗಳಿಗೆ ಒಂದು ನವೀನವೂ ಉಜ್ಜ್ವಲವೂ ಆದ ದಾರಿಯನ್ನು ತೋರಿಸಿದನು. ಹಾಗೂ ಅವನು ಬೋಧಿ ವೃಕ್ಷದ ಕೆಳಗೆ ದುಷ್ಟ ಪ್ರೇತಾತ್ಮಗಳಿಂದ ಪೀಡಿಸಲ್ಪಟ್ಟರೂ ಅಂಜಲಿಲ್ಲ.

ಈ ಸಾಹಸವು ಈಸಾಮಸೀಹನಲ್ಲಿಯೂ ಇತ್ತು. "ಅನ್ಯರನ್ನು ಪ್ರೀತಿಸು" ಎಂದು ಅವನು ಜನರಿಗೆ ಉಪದೇಶ ಮಾಡಿದನು. ಜರುಸಲೇಮಿನ ಧರ್ಮಾಚಾರ್ಯರು ಅಂಥ ಉಪದೇಶಕ್ಕೆ ಅಡ್ಡಿ ಮಾಡಿದರೂ ಅವನು ಅದಕ್ಕಂಜಲಿಲ್ಲ. ಶೂಲಕ್ಕೇರಿಸಿಬಿಟ್ಟ ರೋಮನರಿಗೂ ಅಂಜಲಿಲ್ಲ

ನಾನು ಈಗ ಸಾಹಸದ ಮೂರು ತರಗತಿಗಳನ್ನೂ ಮೂರು ಪರಿಮಾಣಗಳನ್ನೂ ನಿರೂಪಿಸಿದ್ದೇನೆ.

ಶಾರೀರಿಕ ಸಾಹಸವು ನಮ್ಮ ಆತ್ಮಸಂರಕ್ಷಣೆಯ ಸಲುವಾಗಿ ಉಪಯುಕ್ತವಾಗಿರುತ್ತದೆ.

ಯಾವ ಸಾಹಸವು ಮಿತ್ರರು, ನೆರೆಯವರು ಹಾಗೂ ಕಷ್ಟದಲ್ಲಿ ಸಿಲುಕಿದ ಮಾತೃಭೂಮಿ ಇವುಗಳ ಸಲುವಾಗಿ ತೋರಿಸಲಾಗುವದೋ ಅದು ಇನ್ನೊಂದು ಸಾಹಸ.

ಕೊನೆಯಲ್ಲಿ ನೈತಿಕ ಸಾಹಸವು ಬರುತ್ತದೆ. ಅನ್ಯಾಯಿಯಾದ ಮನುಷ್ಯನು ಅದೆಷ್ಟೇ ಬಲಶಾಲಿಯಾಗಿದ್ದರೂ ಅವನನ್ನು ಅದು ಎದುರಿಸಲಿಕ್ಕೆ ಕಲಿಸುತ್ತದೆ. ಮತ್ತು ಸತ್ಯ–ನ್ಯಾಯಗಳ ಧ್ವನಿಯನ್ನು ಅವನ ಕಿವಿಗೆ ತಲಪಿಸುತ್ತದೆ.

ಅಲಮೋಡೆಯ ರಾಜನ ಅರಣ್ಯಪ್ರದೇಶದ ಮೇಲೆ ಕೆಲವು ದಾಳಿಗಾರರು ಏರಿಬರುವರೆಂದು ತಿಳಿಸಿದರು. ಅವರನ್ನು ಕೊಂದು ಓಡಿಹೋಗು

ವಸಕ್ಕಾಗಿ ಒಂದು ಹೊಸ ಸೇನೆಯು ಅಣಿಗೊಂಡಿತು. ಅದರಲ್ಲಿ ಕೋಟಿಯೊಂದು ಜನರು ತಮ್ಮ ಹೆಸರು ಕೊಟ್ಟರು. ಪ್ರತಿಯೊಬ್ಬನಿಗೂ ಒಂದೊಂದು ದೊಡ್ಡ ಕತ್ತಿ ಕೊಡಲಾಯಿತು.

" ಮುಂದುವರಿಯಿರಿ " ಎಂದು ರಾಜನು ಆಜ್ಞಾಪಿಸಿದನು.

ಆದೇ ಉಸುರಿಗೆ ಎಲ್ಲರೂ ಬಹು ತೀವ್ರವಾದ ಕೋಲಾಹಲದೊಡನೆ ತಮ್ಮ ಒರೆಯೊಳಗಿಂದ ಕತ್ತಿಯನ್ನು ಹಿರಿದು ಮೇಲಕ್ಕೆತ್ತಿ ಝಳಪಿಸುತ್ತ ಆವರೆಲ್ಲರೂ ಬಲವಾಗಿ ಬೊಬ್ಬಿರಿದರು.

" ಇದು ಏನು ? " ಎಂದು ರಾಜನು ಕೇಳಿದನು.

ಅವರು ಮರುನುಡಿದದ್ದೇನೆಂದರೆ— " ಪ್ರಭುಗಳೇ, ನಾವು ಸನ್ನದ್ಧರಾಗಿ ನಿಂತಿದ್ದೇವೆ. ಇದರಿಂದ ನಮ್ಮ ಶತ್ರುಗಳೆಂಬವರು ನಮ್ಮ ಆಸ್ಥಾನವನ್ನು ಬಗೆದು ನಮ್ಮ ಮೇಲೆ ಏರಿ ಬರಲಾರರು. "

" ನೀವು ಅಂಜಿ ಗಾಬರಿಗೊಂಡಿದ್ದೀರಿ " ಎಂದು ರಾಜನು ನುಡಿದು " ನಿಮ್ಮಿಂದ ಯಾವ ಕೆಲಸವೂ ಆಗುವದಿಲ್ಲ. ಹೋಗಿರಿ. ನಿಮ್ಮ ನಿಮ್ಮ ಮನೆಗಳಿಗೆ ಮರಳಿರಿ. "

ಈ ಪ್ರಕಾರ ಕತ್ತಿಯನ್ನು ಹಿರಿದು ಝಳಪಿಸುವುದಕ್ಕೂ ಕೂಗಿ ಬೊಬ್ಬಿರಿಯುವುದಕ್ಕೂ ರಾಜನು ಎಷ್ಟೂ ಮಹತ್ವ ಕೊಡಲಿಲ್ಲವೆನ್ನುವುದನ್ನು ನೀವು ತಿಳಿದಿರಿ. ನಿಜವಾದ ವೀರತೆಯಲ್ಲಿ ತೂರಾಟವಾಗಲಿ ಕತ್ತಿಯ ಖಣಖಣಾಟವಾಗಲಿ ಅವಶ್ಯವಿರುವದಿಲ್ಲವೆಂದು ಅವನಿಗೆ ಗೊತ್ತಿತ್ತು.

ಇದಕ್ಕೆ ವಿಪರೀತವಾಗಿ ಕೆಳಗೆ ಬರೆದ ಕಥೆಯಲ್ಲಿ, ಒಂದು ಕಾರ್ಯವನ್ನು ಜನರು ಅದೆಷ್ಟು ಶಾಂತಿಪೂರ್ವಕವಾಗಿ ಕೊನೆಗಾಣಿಸಿದರೆಂಬುದೂ ಹಾಗೂ

ಯಾವ ಪ್ರಕಾರ ಸಮುದ್ರದ ಮಹಾ ಕುತ್ತುಗಳ ಎದುರಿನಲ್ಲಿಯೂ ಅವರು ವೀರತೆಯಿಂದ ಅಚಲವಾಗಿ ನಿಂತರೆಂಬುದೂ ನಿಮಗೆ ಕಂಡುಬರುವುದು.

ಕ್ರಿ. ಶ. ೧೯೧೦ ನೇ ಮಾರ್ಚ ತಿಂಗಳ ಕೊನೆಯಲ್ಲಿ ಸ್ಕಾಟಲಂಡಿನ ಒಂದು ಹಡಗವು ಆಸ್ಟ್ರೇಲಿಯದ ಪ್ರಯಾಣಿಕರನ್ನು ಆಶಾದ್ವೀಪಕ್ಕೆ ತರುತ್ತಿತ್ತು. ಆಕಾಶದಲ್ಲಿ ಮೋಡದ ಹೆಸರು ಸಹ ಇರಲಿಲ್ಲ. ಸಮುದ್ರವು ನೀಲವೂ ಶಾಂತವೂ ಆಗಿತ್ತು.

ಅಕಸ್ಮಾತ್ತಾಗಿ, ಆಸ್ಟ್ರೇಲಿಯದ ಪಶ್ಚಿಮತೀರದಿಂದ ೬ ಮೈಲಿನ ಅಂತರವಿರುವಾಗ ಹಡಗವು ಒಂದು ಬಂಡೆಗಲ್ಲಿಗೆ ಹೋಗಿ ಅಪ್ಪಳಿಸಿತು. ಹಡಗದ ಕೆಲಸಗಾರರೆಲ್ಲರೂ ಒಮ್ಮೆಲೆ ಅತ್ತ ಇತ್ತ ಓಡಾಡತೊಡಗಿದರು. ಎಲ್ಲರೂ ತಂತಮ್ಮ ಕಾರ್ಯದಲ್ಲಿ ಮೈಮರೆತವರಾಗಿದ್ದರು. ಸೀಟಿಗಳ ಸದ್ದು ಕೇಳಿಬರತೊಡಗಿತು. ಆದರೆ ಆ ಗಲಬಿಲಿಗೆ ಮೋಸವಾಗಲಿ ಭಯವಾಗಲಿ ಕಾರಣವಾಗಿರಲಿಲ್ಲ.

ಒಂದು ಕಟ್ಟಾಜ್ಞೆಯು ದುಮುದುಮಿಸಿತು-" ಚಿಕ್ಕ ದೋಣಿಗಳನ್ನು ಹತ್ತಿರಿ."

ಪ್ರಯಾಣಿಕರು ಸಂರಕ್ಷಣೆಯ ಕವಚಗಳನ್ನು ತೊಟ್ಟುಕೊಂಡರು.

ಕಣ್ಣಿಲ್ಲದ ಒಬ್ಬ ವ್ಯಕ್ತಿಯು ತನ್ನ ಆಳಿನ ಕೈಯಾಸರೆಯಿಂದ ಡೆಕ್ಕದ ಮೇಲೆ ಬಂದನು. ಎಲ್ಲರೂ ಅವನಿಗೆ ದಾರಿಯನ್ನು ಬಿಟ್ಟುಕೊಟ್ಟರು. ಅವನು ದುರ್ಬಲನಾಗಿದ್ದನು. ಮೊದಲು ಅವನಿಗೆ ಸಹಾಯ ಸಿಗಲೆಂದು ಎಲ್ಲರೂ ಆಶಿಸುತ್ತಿದ್ದರು.

ಕೆಲವು ಕ್ಷಣಗಳು ಕಳೆಯುವಷ್ಟರಲ್ಲಿ ಹಡಗವು ತೆರವಾಗಿಬಿಟ್ಟಿತು. ಮತ್ತು ಅದು ಶೀಘ್ರವಾಗಿಯೇ ತಳಕ್ಕಿಳಿದುಹೋಯಿತು.

ದೋಣಿಯ ಮೇಲೆ ಕುಳಿತುಕೊಂಡಿದ್ದ ಒಬ್ಬ ಸ್ತ್ರೀಯು ಹಾಡಲಾರಂಭಿಸಿದಳು. ಆದರೇನು? ತೆರೆಗಳ ಕೇಸರುಬಾಸರಿನಿಂದ ನಡುನಡುವೆ ಹಾಡಿನ

ಧ್ವನಿಯು ತಡೆದು ನಿಲ್ಲುತ್ತಿತ್ತು. ಒಂದರ್ಧ ಚುಟಿಕೆ ಅಂಬಿಗನ ಕಿವಿಯಲ್ಲಿ ಬಿದ್ದಾಗ ಅವನ ತೋಳುಗಳಿಗೆ ಅದರಿಂದ ಬಲ ಬರುತ್ತಿತ್ತು.

" ತೀರದೆಡೆಗೆ ಸಾಗಿರಿ। ಅಂಬಿಗರೇ।

ತೀರದೆಡೆಗೆ ಸಾಗಿರಿ. ॥ "

ಅವರೆಲ್ಲರೂ ಕೊನೆಗೆ ಹಡಗಿನ ಕುತ್ತಿನಿಂದ ಬದುಕುಳಿದು ತೀರವನ್ನು ತಲಪಿದರು. ಹಾಗೂ ದಯಾಲುವಾದ ಅಂಬಿಗರಿಂದ ದಡಕ್ಕೆ ತರಲ್ಪಟ್ಟರು.

ಒಬ್ಬ ಪ್ರಯಾಣಿಕನ ಪ್ರಾಣವೂ ಹೋಗಲಿಲ್ಲ. ಈ ರೀತಿಯಾಗಿ ನಾಲ್ಕು ನೂರಾ ಐವತ್ತು ವ್ಯಕ್ತಿಗಳು ತಮ್ಮ ಶಾಂತವೂ ಸಂಯತವೂ ಆದ ಸ್ವಭಾವದಿಂದ ತಮ್ಮ ಸಂರಕ್ಷಣೆ ಮಾಡಿಕೊಂಡರು.

ಇನ್ನು, ನಾನು ನಿಮಗೆ ಶಾಂತಿಪೂರ್ಣವಾದ ಸಾಹಸಿಗರ ಒಂದು ವಿಷಯವನ್ನು ವಿವರಿಸುತ್ತೇನೆ. ಇನ್ನಾವ ಪ್ರದರ್ಶನವೂ ಇಲ್ಲದೆ ಮುನ್ನುಗ್ಗಿ ಅವರು ಕೆಲವೊಂದು ಉಪಯುಕ್ತವೂ ಸುತ್ಯರ್ಹವೂ ಆದ ಕಾರ್ಯಗಳನ್ನು ಮಾಡಿದ್ದಾರೆ.

ಒಂದೂರಿಗೆ ತೀರ ಹತ್ತಿರದಲ್ಲಿ ಒಂದು ಆಳವಾದ ಹೊಳೆ ಹರಿಯುತ್ತಿತ್ತು. ಊರಲ್ಲಿ ಬರಿಯ ಹಿಂದುಗಳ ಮನೆಗಳೇ ಐನೂರು ಇದ್ದವು. ಆ ಊರವರು ಆವರೆಗೆ ಭಗವಾನ್ ಬುದ್ಧದೇವರ ಉಪದೇಶವನ್ನು ಕೇಳಿದ್ದಿಲ್ಲ. ಬುದ್ಧದೇವರು ಅವರ ಬಳಿಗೆ ಹೋಗಬೇಕೆಂದೂ ಅವರಿಗೆ ತಮ್ಮ ಉತ್ಕೃಷ್ಟ ಮಾರ್ಗವನ್ನು ಹೇಳಿಕೊಡಬೇಕೆಂದೂ ನಿಶ್ಚಯಿಸಿದರು.

ಅವರು ಒಂದು ವಿಶಾಲವಾದ ವೃಕ್ಷದ ಕೆಳಗೆ ಕುಳಿತುಕೊಂಡರು. ಶಾಖೆಗಳು ಹೊಳೆಯ ತೀರದವರೆಗೆ ಹಬ್ಬಿಕೊಂಡಿದ್ದವು. ಗ್ರಾಮವಾಸಿ

ಗಳೆಲ್ಲರೂ ನದಿಯ ಆಚೆಯ ದಂಡೆಯ ಮೇಲೆ ಸಹ ನೆರೆದಿದ್ದರು. ಆಗ ಬುದ್ಧದೇವರು ತಮ್ಮ ಮಾತೆತ್ತಿ ಪವಿತ್ರತೆ ಹಾಗೂ ಪ್ರೇಮ ಇವುಗಳ ಸಂದೇಶವನ್ನು ತಿಳಿಸಿದರು. ಅವರ ಉಪದೇಶವು ಒಂದು ಚಮತ್ಕಾರಿಕವಾದ ರೀತಿಯಲ್ಲಿ ಆ ಹರಿಯುತ್ತಿರುವ ನೀರಮೇಲೆ ನದಿಯ ಮುಗ್ಗುಲಿನ ತೀರದವರೆಗೆ ತಲುಪಿತು. ಆದರೂ ಆ ಜನರು ಅವರ ವಚನಗಳನ್ನು ನಂಬುವುದಕ್ಕೆ ಒಪ್ಪಿಕೊಳ್ಳಲಿಲ್ಲ. ಹಾಗೂ ಅವರ ವಿರುದ್ಧವಾಗಿಯೇ ಗಳಪತೊಡಗಿದರು.

ಅವರೊಳಗಿನ ಒಬ್ಬನು ಮಾತ್ರ, ಇನ್ನಿಷ್ಟು ತಿಳಕೊಳ್ಳಲು ಇಚ್ಛಿಸುತ್ತಿದ್ದನು. ಅವನು ಬುದ್ಧದೇವರ ಬಳಿಗೆ ಹೋಗಬೇಕೆಂದು ಬಯಸಿದನು. ಆದರೆ ಅಲ್ಲಿ ಯಾವ ನಾವೆಯೂ ಇರಲಿಲ್ಲ. ದೋಣಿಯೂ ಇರಲಿಲ್ಲ. ಆ ಮನುಷ್ಯನು ಮನಸ್ಸಿನಲ್ಲಿ ದೃಢವಾದ ಸಾಹಸವನ್ನು ನೆಲೆಗೊಳಿಸಿ ಆಳವಾದ ನೀರಮೇಲೆ ನಡೆಯಲು ಆರಂಭಿಸಿದನು. ಈ ಬಗೆಯಾಗಿ ಅವನು ಆ ಗುರುಗಳ ಸನ್ನಿಧಿಗೆ ಬಂದನು. ಅವರಿಗೆ ಅವನು ಪ್ರಣಾಮ ಮಾಡಿ ತುಂಬ ಹರುಷದಿಂದ ಅವರ ಉಪದೇಶವನ್ನು ಕೇಳಿದನು.

ಕಥೆಯಲ್ಲಿ ಹೇಳಲಾಗಿರುವಂತೆ ಆ ಮನುಷ್ಯನು ನಡೆದುಕೊಂಡು ನದಿಯನ್ನು ದಾಟಿದನೆನ್ನುವುದು ನಮಗೆ ತಿಳಿಯದು. ಆದರೂ ಅವನು ಯಾವ ಮಾರ್ಗದಲ್ಲಿ ನಡೆದುಕೊಂಡು, ಪ್ರತಿಯೊಂದು ಪ್ರಕಾರದಿಂದ ಸಾಹಸದ ಪರಿಚಯವನ್ನು ಮಾಡಿಕೊಟ್ಟನೋ ಆ ಮಾರ್ಗವು ಉನ್ನತಿಪಥದೆಡೆಗೆ ಕರೆದೊಯ್ಯುತ್ತದೆ. ಅವನ ಉದಾಹರಣೆಯಿಂದ ಊರೊಳಗಿನ ಇನ್ನುಳಿದವರು ಸಹ ಬುದ್ಧದೇವರ ಉಪದೇಶವನ್ನು ಕೇಳಿದರು. ಅವರ ಅಂತಃಕರಣಗಳು ಆ ಅತ್ಯಂತ ಶುದ್ಧ ವಿಚಾರಗಳ ಕಡೆಗೆ ತೆರೆದುಬಿಟ್ಟವು.

ನದಿಯನ್ನು ಲಂಘಿಸಬಲ್ಲ ಒಂದು ಸಾಹಸವಿದ್ದರೆ ಮನುಷ್ಯನನ್ನು ನ್ಯಾಯಪಥದ ಮೇಲೆ ತೆಗೆದುಕೊಂಡು ಹೋಗುವ ಇನ್ನೊಂದು ಸಾಹಸ

ವಿರುತ್ತದೆ. ಆದರೆ ಸತ್ಯಪಥದ ಮೇಲೆ ನಡೆಯಲು ಆರಂಭಿಸುವ ಅಪೇಕ್ಷೆಯನ್ನು ಅವರಲ್ಲಿ ದೃಢಗೊಳಿಸುವುದಕ್ಕಾಗಿ ಯಾವ ಸಾಹಸವು ಬೇಕಾಗುತ್ತದೆಯೋ ಅದು ಅವುಗಳಿಗಿಂತ ಹಿರಿಯದು.

ಕೋಳಿ ಹಾಗೂ ಅದರ ಪಿಳ್ಳೆ ಇವುಗಳ ಒಂದು ಉದಾಹರಣೆಯನ್ನು ಕೇಳಿರಿ.

ಗೌತಮ ಬುದ್ಧರು ತಮ್ಮ ಶಿಷ್ಯರಿಗೆ ಹೇಳಿದ್ದೇನಂದರೆ— ನೀವು ನಿಮ್ಮ ಮುಕ್ತಿಗೆ ಸಂಪೂರ್ಣ ಪ್ರಯತ್ನ ಮಾಡಿರಿ. ಆ ಪ್ರಯತ್ನದ ಫಲವು ನಿಮಗೆ ಸಿಕ್ಕೇ ಸಿಗುವದೆಂಬುದರ ಮೇಲೆ ವಿಶ್ವಾಸವಿಡಿರಿ.

ಅವರು ಮತ್ತೂ ಹೇಳಿದರು — ಕೋಳಿಯು ತತ್ತಿಯಿಟ್ಟು ಅದಕ್ಕೆ ಕಾವು ಕೊಡುವದಾದರೂ, ತನ್ನ ಪಿಳ್ಳೆಗಳು ತಮ್ಮ ಚುಂಚುವಿನಿಂದ ತತ್ತಿಯೊಡೆದು ಸೂರ್ಯಪ್ರಕಾಶದಲ್ಲಿ ಬಂದುಬಿಡುವುದಕ್ಕೆ ಸಮರ್ಥವಾಗಲೆಂಬುವ ವಿಷಯವನ್ನು ಕುರಿತು ಒಂದಿಷ್ಟೂ ಚಿಂತಿಸುವದಿಲ್ಲ. ಅದೇ ಪ್ರಕಾರ ನೀವಿನ್ನು ಹೆಚ್ಚಾಗಿ ಅಂಜತಕ್ಕದ್ದಲ್ಲ. ನೀವು ಸತ್ಯ ಮಾರ್ಗವನ್ನು ದೃಢವಾಗಿ ಅನುಸರಿಸಿದರೆ ಪ್ರಕಾಶವನ್ನು ನಿಶ್ಚಯವಾಗಿ ತಲಪುವಿರಿ.

ಸರಿಯಾದ ದಾರಿಯಲ್ಲಿ ನಡೆಯುವುದು, ಆವೇಗ- ಮೂಢ ವಿಚಾರ- ಸಂಕಟಗಳನ್ನು ಎದುರಿಸುವುದು, ಯಾವಾಗಲೂ ಮುಂದೆ ಪ್ರಕಾಶದ ಕಡೆಗೇ ಸಾಗುವ ಪ್ರಯತ್ನದಲ್ಲಿ ತೊಡಗುವುದು ಇವೇ ನಿಜವಾದ ಸಾಹಸಗಳಾಗಿವೆ.

ಪ್ರಾಚೀನ ಕಾಲದಲ್ಲಿ ಬ್ರಹ್ಮದತ್ತನೆಂಬ ರಾಜನು ಬನಾರಸದಲ್ಲಿ ಆಳುತ್ತಿದ್ದನು. ಅವನ ಶತ್ರುಗಳಲ್ಲೊಬ್ಬನಾದ ಯಾವುದೋ ಒಂದು ದೇಶದ ಅರಸನು ತನ್ನ ಆನೆಗೆ ಯುದ್ಧ ಶಿಕ್ಷಣವನ್ನು ಕೊಡುತ್ತಿದ್ದನು.

ಯುದ್ಧ ಘೋಷಣೆ ಆಗಿಬಿಟ್ಟಿತು. ಆ ವಿಶಾಲವಾದ ಆನೆಯು ತನ್ನ ಒಡೆಯನಾದ ರಾಜನನ್ನು ಬನಾರಸ ಕೋಟೆಯ ವರೆಗೆ ತೆಗೆದುಕೊಂಡು ಬಂದಿತು.

ಮುತ್ತಿಗೆ ಹಾಕಿದ ಆ ಸೈನಿಕರು ಕೋಟೆಯ ಗೋಡೆಯ ಮೇಲಿನಿಂದ ಕುದಿಯುತ್ತಿರುವ ದ್ರವ್ಯವನ್ನೂ ಕಿಂಡಿಗಳಿಂದ ಬೀಸುಗಲ್ಲುಗಳನ್ನೂ ಸುರಿಸ ತೊಡಗಿದರು. ಆ ಭಯಂಕರವಾದ ಸುರಿಮಳೆಯ ಮುಂದೆ ಆನೆಯು ಒಮ್ಮೆಲೆ ಹಿಂಜರಿದುಬಿಟ್ಟಿತು. ಆದರೆ ಯಾವ ಮನುಷ್ಯನು ಅದನ್ನು ಈಉ ಮಾಡಿದ್ದನೋ ಅವನು ಅದರ ಬಳಿಗೆ ಓಡಿಬಂದು ಹೇಳಿದ್ದೇನಂದರೆ—

"ಎಲೆ ಆನೆಯೇ, ನೀನೇನೋ ವೀರನು. ವೀರನಂತೆ ಕಾರ್ಯ ಮಾಡು. ಹಾಗೂ ಆಗಸೆಯನ್ನು ಕೆಡಹಿ ಹುಡಿಗೂಡಿಸು."

ಈ ಶಬ್ದಗಳಿಂದ ಹುರುಪುಗೊಂಡು ಆ ವಿಶಾಲವಾದ ಪ್ರಾಣಿಯು ಆಗಸೆಗೆ ಒಂದು ಬಲವಾದ ಏಟು ಕೊಟ್ಟಿತು. ಒಳಗೆ ಪ್ರವೇಶ ಮಾಡಿತು. ಹಾಗೂ ರಾಜನಿಗೆ ಗೆಲವನ್ನು ತಂದುಕೊಟ್ಟಿತು.

ಸಾಹಸವು ಈ ರೀತಿಯಾಗಿ ಬಾಧೆಗಳನ್ನೂ ಗಂಡಾಂತರಗಳನ್ನೂ ಗೆದ್ದು ವಿಜಯ ಪಥವನ್ನು ಸುಗಮಗೊಳಿಸುತ್ತದೆ.

ಮನುಷ್ಯನಿರಲಿ ಪಶುವಿರಲಿ, ಯಾರಿದ್ದರೂ ಅವರಿಗೆ ಹೊಗಳಿಕೆಯ ಶಬ್ದಗಳು ಅದಾವ ಪ್ರಕಾರ ಸಹಾಯವನ್ನು ತಂದೊದಗಿಸುವವು, ನೋಡಿರಿ!

ಮುಸಲ್ಮಾನರ ಒಂದು ಉತ್ತಮವಾದ ಪುಸ್ತಕದಲ್ಲಿ ಉದಾರ ಹೃದಯದ ವ್ಯಕ್ತಿಯಾದ ಅಬುಸೈಯದನ ಒಂದು ಕಥೆ ಇದೆ. ಅದು ನಮಗೆ ಒಂದು ಒಳ್ಳೆಯ ಉದಾಹರಣೆ ಕೊಡುತ್ತದೆ.

ಒಮ್ಮೆ ಅವನು ಜ್ವರದಿಂದ ಪೀಡಿತನಾಗಿದ್ದನು. ಅವನ ಮಿತ್ರರು ಅವನ ಸ್ವಾಸ್ಥ್ಯದ ಸಮಾಚಾರವನ್ನು ಕೇಳಬೇಕೆಂದು ಅವನ ಮನೆಗೆ ಹೋದರು.

ಕವಿಯು ಮಗನು ಅವರನ್ನು ಬಾಗಿಲಲ್ಲಿ ಸ್ವಾಗತಿಸಿದನು. ಅವನ ತುಟಿಯು ಮೇಲೆ ಮುಗುಳುನಗೆ ಇತ್ತು. ಯಾಕೆಂದರೆ ರೋಗಿಯು ಮೊದಲಿನಿಂದಲೂ ಒಳ್ಳೆತಾಗಿದ್ದನು. ಆ ಜನರು ಅವನ ಕೋಣೆಯನ್ನು ತಲುಪಿ ಅಲ್ಲಿ ಕುಳಿತು ಕೊಂಡರು. ತನ್ನ ನಿರಂತರವಾದ ಹಾಸ್ಯ ಸ್ವಭಾವಕ್ಕೆ ಅನುಸಾರವಾಗಿ ಅವನು ಮಾತಾಡುವುದನ್ನು ಕೇಳಿ ಎಲ್ಲರಿಗೂ ಬಲು ಸೋಜಿಗವೆನಿಸಿತು, ಬಳಿಕ ಜ್ವರ ಬಿಡಹತ್ತಿದ್ದರಿಂದ ಅವನಿಗೆ ನಿದ್ರೆಯು ಬಂದು ಆವರಿಸಿತು ಹಾಗೂ ಜನರೂ ಮಲಗಿಬಿಟ್ಟರು.

ಸಾಯಂಕಾಲಕ್ಕೆ ಎಲ್ಲರೂ ಎದ್ದು ಕುಳಿತರು. ಅಬುಸ್ಸೈಯುದನು ಅಭ್ಯಾಗತರನ್ನು ಜಲಪಾನದಿಂದ ಸತ್ಕಾರಗೊಳಿಸಿದನು. ಕೋಣೆಯನ್ನು ಸುವಾಸಿತ ಗೊಳಿಸುವ ಸಲುವಾಗಿ ಊದಬತ್ತಿಗಳನ್ನು ಹೊತ್ತಿಸಿಕೊಟ್ಟನು.

ಅಬುಸ್ಸೈಯುದನು ಪ್ರಾರ್ಥನೆ ಮುಗಿಸಿ ಎದ್ದುಕುಳಿತು ಒಂದು ಚಿಕ್ಕದಾದ ಸ್ವರಚಿತ ಕವಿತೆಯನ್ನೋದಲು ಆರಂಭಿಸಿದನು.

“ ದುಃಖದ ಸಮಯದಲ್ಲಿ ನಿರಾಶನಾಗಬೇಡ. ಯಾಕಂದರೆ ಪ್ರಸನ್ನತೆಯ ಒಂದು ಗಳಿಗೆಯು ನಿನ್ನ ಸರ್ವ ದುಃಖಗಳನ್ನು ಹೊಡೆದೋಡಿಸಿ ಬಿಡುವದು.

ಮರುಭೂಮಿಯ ಚುರುಕಾದ ಉರಿಗಾಳಿಯು ಹರಿದುಬರುತ್ತಿದೆ. ಆದರೆ ಅದು ತಂಗಾಳಿಯಾಗಿ ಮಾರ್ಪಡಬಲ್ಲದು.

ಕಾರ್ಮೋಡಗಳು ಮುಗಿಲಲ್ಲಿ ಹೆಣೆದುಕೊಂಡಿವೆ. ಆದರೆ ಅವು ಜಲ ಪ್ರಲಯ ಮಾಡುವ ಮೊದಲೇ ಹಾರಿ ಹೋಗಬಲ್ಲವು.

ಬೆಂಕಿ ಹತ್ತಬಲ್ಲದು. ಆದರೆ ನಿಮ್ಮ ಗಂಟುಗಳೂ ಪೆಟ್ಟಿಗೆಗಳೂ ನಂದಿ ಬಿಡುವದುಂಟು.

ದುಃಖವು ಬರುತ್ತದೆ. ಆದರೆ ಹೊರಟೂ ಹೋಗುತ್ತದೆ. ಆದಕಾರಣ ವಿಪತ್ತು ಬಂದಾಗ ಎದೆಗಾರನಾಗು.

ಸಮಯವು ಎಲ್ಲ ಸೋಜಿಗಗಳಲ್ಲಿ ಹಿರಿಯದು. ಈಶ್ವರನ ಕೃಪೆಯಿಂದ ನೀನು ಯಾವಾಗಲೂ ಸ್ವಕಲ್ಯಾಣಚಿಂತನೆ ಮಾಡಬೇಕು. ”

ಈ ವಿಚಾರಗಳಿಂದ ತುಂಬಿದ ಸುಂದರ ಕವಿತೆಯನ್ನು ಕೇಳಿ ಎಲ್ಲರೂ ಉಲ್ಲಾಸವನ್ನೂ ಉತ್ಸಾಹವನ್ನೂ ಅನುಭವಿಸುತ್ತ ತಂತಮ್ಮ ಮನೆಗೆ ತಿರುಗಿ ಹೋದರು. ಈ ಪ್ರಕಾರ ಒಬ್ಬ ರೋಗಿ ಮಿತ್ರನು ತನ್ನ ನಿರೋಗಿ ಮಿತ್ರರಿಗೆ ಸಹಾಯ ಮಾಡಿದನು.

ಯಾರು ಸ್ವಯಂ ಸಾಹಸಿಯೋ ಅವನೇ ಬೇರೊಬ್ಬರಿಗೆ ಸಾಹಸವನ್ನು ನೀಡಬಲ್ಲನೆಂಬುದು ನಿಶ್ಚಯ. ಅದೇ ಪ್ರಕಾರ ಜ್ವಲಿಸುತ್ತಿರುವ ಮೇಣ ಬತ್ತಿಯು ತನ್ನ ಜ್ವಾಲೆಯಿಂದ ಇನ್ನೊಂದು ಮೇಣಬತ್ತಿಯು ಪ್ರಜ್ವಲಿಸುವಂತೆ ಮಾಡಬಲ್ಲದು.

ವೀರ ಬಾಲಕ ಬಾಲಕಿಯರೇ, ನೀವು ಕಥೆಯನ್ನು ಅಭ್ಯಸಿಸಿದಿರಿ. ನೀವು ಬೇರೊಬ್ಬರಿಗೆ ಸಾಹಸ ನೀಡುವುದನ್ನು ಕಲಿಯಿರಿ; ಹಾಗೂ ಸ್ವಯಂ ಸಾಹಸಿಗಳೂ ಆಗಿರಿ.

೩

# ಪ್ರಫುಲ್ಲತೆ



ಮಳೆನಾಡಿನ ಯಾವುದೋ ಒಂದು ದೊಡ್ಡ ಪಟ್ಟಣದಲ್ಲಿ ಒಂದು ದಿನ ಇಳಿಹೊತ್ತಿನಲ್ಲಿ ನಾನು ಮಕ್ಕಳಿಂದ ತುಂಬಿದ ಏಳೆಂಟು ಗಾಡಿಗಳನ್ನು ಕಂಡೆನು. ಅವರು ಮುಂಜಾವಿನಲ್ಲಿಯೇ ಊರಕಡೆಗೆ ಹೊಲದಿಂದ ಆಟ-ಪಾಟಗಳ ಸಲುವಾಗಿ ಹೋಗಿದ್ದರು ಆದರೆ ಮಳೆಯ ಸಲುವಾಗಿ ಅವರು ವೇಳೆಗಿಂತ ಮುಂಚಿತವಾಗಿಯೇ ಮರಳಬೇಕಾಯ್ತು.

ಆದರೇನು ? ಆ ಮಗುಗಳು ನಗುತ್ತಿದ್ದವು; ಹಾಡುತ್ತಿದ್ದವು; ಹಾಗೂ ಬರುಹೋಗುವವರಿಗೆ ನಗೆಚಾಟಿಕೆಯ ಸಂಕೇತಗಳನ್ನು ಮಾಡುತ್ತಿದ್ದವು. ಆ ನಿರುತ್ಸಾಹದ ಸಮಯದಲ್ಲಿ ಸಹ ಅವರು ತಮ್ಮ ಪ್ರಸನ್ನತೆಯನ್ನು ಕಾಯ್ದುಕೊಂಡಿದ್ದರು. ಒಬ್ಬನು ಉದಾಸೀನನಾದರೆ ಇನ್ನೊಬ್ಬನು ತನ್ನ ಹಾಡುಗಳಿಂದ ಅವನನ್ನು ಪ್ರಫುಲ್ಲಿತಗೊಳಿಸಿಬಿಡುತ್ತಿದ್ದನು. ಕೆಲಸಬೊಗಸೆಗಳಲ್ಲಿ ತೊಡಗಿದವರು ಅವರ ಕಿಲಿಕಿಲಾಟವನ್ನು ಕೇಳಿದಕೂಡಲೇ ಅವರಿಗೆ ಆಕಾಶದ ಕಪ್ಪುಮೋಡಗಳು ತುಸು ತಿಳಿಯಾಗಿಹೋದಂತೆ ಅನಿಸಿಬಿಡುವದು.

ಖುರಾಸಾನದಲ್ಲಿ ಒಬ್ಬ ರಾಜಕುಮಾರನಿದ್ದನು. ಅವನ ಹೆಸರು ಅಮರ. ಅವನಿಗೆ ಸೊಗಸಾದ ಆಸ್ತಿಪಾಸ್ತಿಯಿತ್ತು. ಒಂದು ಸಾರೆ ಅವನು ಯುದ್ಧಕ್ಕೆ

ಹೋದಾಗ ಅವನ ಅಡಿಗೆಯ ಸಾಹಿತ್ಯವನ್ನು ಹೊತ್ತುಕೊಂಡು ಮೂರುನೂರು ಒಂಟೆಗಳು ಅವನ ಸಂಗಡ ಹೋಗಿದ್ದವು. ಆದರೆ ದುರ್ಭಾಗ್ಯದಿಂದ ಅವುಗಳಿಗೆ ಆತನ ಹಸಿವೆ ಹಿಂಗಿಸಲಿಕ್ಕಾಗಲಿಲ್ಲ. ಬಳಿಯಲ್ಲಿ ನಿಂತ ತನ್ನ ಪ್ರಮುಖ ಅಡಿಗೆಯವನು — ಅವನೊಬ್ಬ ಒಳ್ಳೆಯ ಮನುಷ್ಯನಾಗಿದ್ದನು — ಅವನಿಗೆ ಹೇಳಿದ್ದೇನೆಂದರೆ "ಅಣ್ಣಾ, ಉಣ್ಣಲಿಕ್ಕೇನಾದರೂ ಸಿದ್ಧಪಡಿಸಿಕೊಡು."

ಆ ಬಡಪಾಯಿಯ ಬಳಿಯಲ್ಲಿ ಮಾಂಸದ ಒಂದು ತುಣುಕು ಉಳಿದಿತ್ತು. ಅವನದನ್ನು ಒಂದು ಗಡಿಗೆಯಲ್ಲಿ ಕುದಿಸಲಿಕ್ಕೆ ಇಟ್ಟನು. ಹಾಗೂ ಅಡಿಗೆಯನ್ನು ಒಂದಿಷ್ಟು ರುಚಿಕಟ್ಟು ಮಾಡಬೇಕೆಂದು ಸ್ವತಃ ಕೆಲವೊಂದು ಕಾಯಿಪಲ್ಲೆಗಳನ್ನು ಹುಡುಕಲು ಹೊರಟನು.

ಅಷ್ಟರಲ್ಲಿ ಒಂದು ನಾಯಿ ಅಲ್ಲಿಗೆ ಬಂದಿತು. ಮಾಂಸದ ವಾಸನೆಗೆ ಆಕರ್ಷಿತವಾಗಿ ಅದು ತನ್ನ ಮುಖವನ್ನು ಗಡಿಗೆಯಲ್ಲಿ ಹಾಕಿತು; ಆದರೆ ಬಿಸಿಯ ಕಾವು ತಗುಲಿ ಅದು ತಟ್ಟನೆ ತುಸು ಅಡ್ಡತಿಡ್ಡವಾಗಿ ಎಳೆದಾಡಿತು. ಅದರಿಂದ ಅದರ ತಲೆಯು ಗಡಿಗೆಯಲ್ಲಿ ಸಿಕ್ಕುಬಿದ್ದಿತು. ಅದು ಗಾಬರಿಯಾಗಿ ಗಡಿಗೆ ಸಹಿತ ಅಲ್ಲಿಂದ ಓಡಿತು.

ಅಮೀರನು ಅದನ್ನು ನೋಡಿ ಉಚ್ಚ ಸ್ವರದಲ್ಲಿ ನಕ್ಕುಬಿಟ್ಟನು. ಅವನ ಅಧಿಕಾರಿಯು ಅಂದರೆ ಚೌಕಸಿಯ ಸಲುವಾಗಿ ನಿಯಮಿಸಲ್ಪಟ್ಟವನು ಅಮೀರನಿಗೆ— "ಅದು ಹೇಗೆ ನಗೆ ಬರುವುದು ? ಈ ದುಃಖದ ಸಮಯದಲ್ಲಿಯೂ ನೀವು ನಗುತ್ತಿರುವಿರಲ್ಲ ?" ಎಂದು ಕೇಳಿದನು.

ಅಮೀರನು ಓಡಿಹೋಗುತ್ತಿರುವ ನಾಯಿಗೆ ಎಚ್ಚರಿಕೆ ಕೊಡುತ್ತ ನುಡಿದದ್ದೇನೆಂದರೆ— ಇಂದು ಮುಂಜಾವಿನವರೆಗೆ ನನ್ನ ಅಡಿಗೆಯ ಸಾಮಾನುಗಳನ್ನು ತೆಗೆದುಕೊಂಡು ಹೋಗುವುದಕ್ಕೆ ಮೂರುನೂರು ಒಂಟೆಗಳು ಬೇಕಾಗುತ್ತಿದ್ದವು. ಈಗ ಆ ಎಲ್ಲದರ ಸಲುವಾಗಿ ಒಂದು ನಾಯಿಯೇ ಸಾಕಾಗಿ ಬಿಟ್ಟಿತೆಂಬುದು ನೆನಪಾಗಿ ನಗೆ ಬರುತ್ತಿದೆ.

ಪ್ರಸನ್ನನಾಗಿರುವುದರಲ್ಲಿ ಅವುರನಿಗೆ ಒಂದು ಸವಿಯು ದೊರೆಯು ತ್ತಿತ್ತು. ಪರರನ್ನು ಪ್ರಸನ್ನಗೊಳಿಸುವುದಕ್ಕೆ ಆವನು ಅಷ್ಟೊಂದು ಪ್ರಯತ್ನ ಶೀಲನಾಗಿರಲಿಲ್ಲ. ಆದರೂ ಅವನ ವಿನೋದಿ ಸ್ವಭಾವವನ್ನು ಪ್ರಶಂಸಿಸದೆ ಇರಲಿಕ್ಕಾಗದು. ಯಾರಾದರೂ ಅದೆಂಥದೋ ಗಂಭೀರ ವಿಪತ್ತಿನಲ್ಲಿ ಸಹ ಪ್ರಸನ್ನರಾಗಿರಬಲ್ಲರಾದರೆ ನಾವು ವಾಡಿಕೆಯ ಚಿಂತೆಯಲ್ಲಿ ಒಂದು ಮುಗುಳು ನಗೆಯನ್ನಾದರೂ ತರಲಾರೆವೇ ?

ಇರಾಣ ದೇಶದಲ್ಲಿ ಒಬ್ಬ ಸ್ತ್ರೀ ಇದ್ದಳು. ಆವಳು ಜೇನು ಮಾರುವ ಉದ್ಯೋಗವನ್ನು ಕೈಕೊಂಡಿದ್ದಳು. ಅವಳ ನಡೆನುಡಿಗಳ ಪದ್ಧತಿಯು ಬಹು ಆಕರ್ಷಕವಾಗಿತ್ತು. ಅವಳ ಅಂಗಡಿಯ ಸುತ್ತಲು ಗಿರಾಕಿಗಳು ಕಿಕ್ಕಿರಿಯು ತ್ತಿದ್ದರು. ಈ ಕಥೆಯನ್ನು ಹೇಳುವ ಕವಿಯು ಆನ್ನುವುದೇನೆಂದರೆ— ಆವಳು ಜೇನಿನ ಬದಲು ವಿಷವನ್ನು ಮಾರುತ್ತಿದ್ದರೂ ಜನರು ಅವಳಲ್ಲಿ ಅದನ್ನು ಸಹ ಜೇನುತುಪ್ಪವೆಂದೇ ತಿಳಿದು ಕೊಂಡುಕೊಳ್ಳುತ್ತಿದ್ದರು.

ಒಬ್ಬ ದುಷ್ಟಸ್ವಭಾವದ ಮನುಷ್ಯನು, ಈ ಉದ್ಯೋಗದಿಂದ ಆ ಸ್ತ್ರೀಯು ಬಹಳ ಲಾಭ ಪಡೆಯುತ್ತಿರುವುದನ್ನು ಕಂಡು ಅವನೂ ಆ ಉದ್ಯೋಗವನ್ನು ತನ್ನದನ್ನಾಗಿ ಮಾಡಿಕೊಳ್ಳಬೇಕೆಂದು ನಿಶ್ಚಯಿಸಿದನು.

ಅಂಗಡಿಯನ್ನೇನೋ ಆತನು ತೆರೆದನು. ಆದರೆ ಜೇನಿನ ಸಜ್ಜು-ಸಿದ್ಧತೆಯ ಆಡಂಬರದ ಹಿಂದೆ ಅವನ ರೂಪವು ಕಠೋರಕ್ಕಿಂತ ಕಠೋರವಾಗಿಯೇ ಉಳಿಯಿತು. ಅವನು ಗಿರಾಕಿಗಳನ್ನು ಯಾವಾಗಲೂ ತನ್ನ ಗಂಟಿಕ್ಕಿದ ಹುಬ್ಬು ಗಳಿಂದಲೇ ಸ್ವಾಗತಿಸುತ್ತಿದ್ದನು. ಆದ್ದರಿಂದ ಎಲ್ಲರೂ ಅವನ ವಸ್ತುವನ್ನು ಬಿಟ್ಟುಕೊಟ್ಟು ಮುಂದೆ ಹೋಗುವರು. ಕವಿ ಮುಂದೆ ಹೇಳುವದೇ ನೆಂದರೆ— ಆತನ ಜೇನಿನ ಸಮಿಾಪದಲ್ಲಿ ಒಂದು ನೊಣವು ಸಹ ಸುಳಿಯುವ ಸಾಹಸ ಮಾಡುತ್ತಿದ್ದಿಲ್ಲ. ಸಂಜೆಯಾದರೂ ಆತನ ಕೈ ಕೆಳಗೇ ಇಳಿಬಿದ್ದಿ ರುತ್ತಿದ್ದವು. ಒಂದು ದಿವಸ ಒಬ್ಬ ಸ್ತ್ರೀಯು ಅವನನ್ನು ಕಂಡು ತನ್ನ

ಪತಿಗೆ-- ಕಹಿ ಮುಖವು ಜೇನನ್ನು ಸಹ ಕಹಿ ಮಾಡಿಬಿಡುತ್ತದೆ—ಎಂದು ಹೇಳಿದಳಂತೆ !

ಉದ್ಯೋಗಿಯಾದ ಆ ಸ್ತ್ರೀಯು ಕೇವಲ ಗಿರಾಕಿಗಳನ್ನು ಆಕರ್ಷಿಸುವುದಕ್ಕಾಗಿಯೆ ಮುಗುಳುನಗೆ ಬೀರುತ್ತಿದ್ದಳೇ ? ಇಲ್ಲ. ಅವಳ ಪ್ರಫುಲ್ಲತೆಯು ಅವಳ ಒಳ್ಳೆಯ ಸ್ವಭಾವದ ಅಂಗವಾಗಿತ್ತೆಂದು ನಮಗೇನೋ ವಿಶ್ವಾಸವಿದೆ. ಜಗತ್ತಿನಲ್ಲಿ ನಮ್ಮ ಕಾರ್ಯವು ಬರಿಯ ಕೊಳ್ಳುವುದು—ಮಾರುವುದು ಇಷ್ಟೇ ಆಗಿರಲಾರದು. ನಾವು ಇಲ್ಲಿ ಒಬ್ಬರು ಇನ್ನೊಬ್ಬರಿಗೆ ಗೆಳೆಯರಾಗಿ ಇರಬೇಕಾಗಿರುತ್ತದೆ. ಆ ಒಳ್ಳೆಯ ಸ್ತ್ರೀಯ ಗಿರಾಕಿಗಳು ತಿಳಕೊಂಡಿದ್ದೇನೆಂದರೆ—ಅವಳು ಒಬ್ಬ ಅಂಗಡಿಕಾರ್ತಿ ಮಾತ್ರವಲ್ಲದೆ ಇನ್ನೂ ಏನೇನೋ ಆಗಿದ್ದಳು. ಅವಳು ಜಗತ್ತಿನ ಒಬ್ಬ ಪ್ರಸನ್ನಮುಖದ ನಾಗರಿಕಳೂ ಆಗಿದ್ದಳು.

ಕೆಳಗಡೆಯಲ್ಲಿ ಯಾವ ಮಹಾಪುರುಷನ ಪರಿಸ್ಥಿತಿಯನ್ನು ತೋರಿಸುತ್ತ ಹೋಗುವೆನೋ ಆತನ ಪ್ರಸನ್ನತೆಯು ಒಂದು ಸುಂದರವಾದ ಉಗಮಸ್ಥಾನದಿಂದ ನೀರಿನ ಹೊನಲು ಪ್ರವಹಿಸಿದಂತೆ ಪ್ರವಾಹಿತವಾಗುತ್ತಿತ್ತು. ಅವನಿಗೆ ಲಾಭದ ಇಚ್ಛೆಯೂ ಇರಲಿಲ್ಲ. ಗಿರಾಕಿಗಳದೂ ಇರಲಿಲ್ಲ. ಅವನು ಪ್ರಸಿದ್ಧನೂ ಗೌರವಶಾಲಿಯೂ ಆದ ರಾಮನು.

ರಾಮನು ಹತ್ತು ತಲೆ ಹಾಗೂ ಇಪ್ಪತ್ತು ಭುಜಗಳುಳ್ಳ ರಾವಣನನ್ನು ಹೊಡೆದು ಹಾಕಿದ್ದನು. ನಾನು ನಿಮಗೆ ಈ ಕಥೆಯ ಪ್ರಾರಂಭವನ್ನು ಹೇಳಿಬಿಟ್ಟಿದ್ದೇನೆ. ಇರಲಿ. ಆ ಯುದ್ಧವು ಬಹು ಭಯಂಕರವಾಗಿತ್ತಲ್ಲದೆ ಕೆಲವೊಂದು ಜನಾಂಗಗಳ ನಡುವೆ ನಡೆದಿತ್ತು. ಸಾವಿರಾರು ಕಪಿಗಳೂ ಕರಡಿಗಳೂ ರಾಮನ ಸೇವೆಯಲ್ಲಿ ತಮ್ಮ ಪ್ರಾಣಗಳನ್ನು ಬಲಿ ಕೊಟ್ಟವು. ಅವನ ಶತ್ರುಗಳಾದ ರಾಕ್ಷಸರ ಹೆಣಗಳಿಂದ ಬಣಿವೆಯೇರಿತ್ತು. ಅವರ ರಾಜನು ನಿರ್ಜೀವವಾದ ನೆಲದ ಮೇಲೆ ಬಿದ್ದುಕೊಂಡಿದ್ದನು. ಅಲಲ ! ಅವನನ್ನು

ಹೊಡೆದುಹಾಕುವುದು ಅದೆಷ್ಟು ಕಠಿಣವಾಗಿತ್ತು! ಒಂದಾದ ಬಳಿಕ ಒಂದರಂತೆ ರಾಮಚಂದ್ರದೇವನು ಅವನ ಹತ್ತು ತಲೆಗಳನ್ನೂ ಇಪ್ಪತ್ತು ಭುಜಗಳನ್ನೂ ಕತ್ತರಿಸಿದನು. ಆದರೆ ಅದು ಹೇಗೋ ಅವು ಮತ್ತೆ ಚಿಗಿತು ಬಿಡುವವು. ಒಂದಾದಮೇಲೆ ಒಂದರಂತೆ ಅವನು ಅನೆಷ್ಟು ಕತ್ತರಿಸಿ ಹಾಕಿದನೋ ಲೆಕ್ಕವಿಲ್ಲ. ಕೊನೆಯಲ್ಲಿ ಆಕಾಶದಿಂದ ತಲೆ ಹಾಗೂ ತೋಳುಗಳ ಮಳೆಯೇ ಸುರಿಯತೊಡಗಿದೆಯೆಂದು ಅವನಿಗೆ ಕಾಣತೊಡಗಿತು.

ಆ ಭಯಂಕರವಾದ ಯುದ್ಧವು ಮುಗಿಯುವ ಹೊತ್ತಿಗೆ ಯುದ್ಧದಲ್ಲಿ ಸತ್ತುಹೋಗಿದ್ದ ಆ ಎಲ್ಲ ಕಪಿಗಳನ್ನೂ ಕರಡಿಗಳನ್ನೂ ಪುನರ್ಜೀವಿತಗೊಳಿಸಲಾಯಿತು. ಅವರೆಲ್ಲರು ಹೀಗೆ ಎದ್ದು ನಿಲ್ಲಲು ಒಂದು ಮಹಾ ಸೇನೆಯು ಆಜ್ಞೆಯನ್ನು ಪ್ರತೀಕ್ಷಿಸುತ್ತ ನಿಂತಂತೆ ತೋರಿತು. ಯಶಸ್ವಿಯಾದ ರಾಮನ ವ್ಯವಹಾರವು ವಿಜಯ ದೊರೆತ ಬಳಿಕ ಸರಲವೂ ಶಾಂತವೂ ಆಗಿತ್ತು. ಅವನು ತನ್ನ ನಂಬಿಗೆಯ ಮಿತ್ರರ ಕಡೆಗೆ ತನ್ನ ಕೃಪಾಪೂರ್ಣವಾದ ದೃಷ್ಟಿಯನ್ನು ಬೀರಿದನು.

ಆಗಲೇ ರಾವಣನ ಸಿಂಹಾಸನದ ಉತ್ತರಾಧಿಕಾರಿಯಾಗಿದ್ದ ವಿಭೀಷಣನು ಆ ಯುದ್ಧದಲ್ಲಿ ಇಷ್ಟೊಂದು ಸಾಹಸಪೂರ್ವಕವಾಗಿ ಭಾಗ ವಹಿಸಿದ ಆ ವೀರರ ಸಲುವಾಗಿ ಒಂದು ಗಾಡಿತುಂಬ ರತ್ನಗಳನ್ನೂ ಉಚ್ಚತರದ ಉಡುಗೊರೆಗಳನ್ನೂ ತಂದನು.

ರಾಮನು ಹೇಳಿದ್ದೇನೆಂದರೆ—ಮಿತ್ರನಾದ ವಿಭೀಷಣನೇ ಕೇಳು. ನೀನು ಮೇಲೆ ಮುಗಿಲಲ್ಲಿ ಏರಿಹೋಗು. ಮತ್ತು ಅಲ್ಲಿಂದ ಈ ನಿನ್ನ ಕಾಣಿಕೆಗಳನ್ನು ಸೇನೆಯ ಎದುರಿಗೆ ಚಲ್ಲಿಕೊಡು.

ವಿಭೀಷಣನು ಹಾಗೆಯೇ ಮಾಡಿದನು. ತನ್ನ ರಥವನ್ನು ಅವನು ಮೇಲೆ ತೆಗೆದುಕೊಂಡು ಹೋದನು. ಬಳಿಕ ಅಲ್ಲಿಂದವನು ಆ ಎಲ್ಲ ಥಳಥಳಿಸುವ

ರತ್ನದೊಡವೆಗಳನ್ನೂ ಬಣ್ಣಬಣ್ಣದ ಸುಂದರ ವಸ್ತ್ರದುಡುಗೊರೆಗಳನ್ನೂ ಕೆಳಗಡೆಗೆಸೆದನು.

ಆಗ ಏನಾಯಿತು? ಇಳಿದುಬರುವ ಆ ನಿಧಿಯ ಮೇಲೆ ಎಲ್ಲ ಕಪಿಗಳೂ ಕರಡಿಗಳೂ ಒಂದನ್ನೊಂದು ನೂಗಿಸುತ್ತ ಎರಗಿಬಿದ್ದವು. ಅದೊಂದು ಅಂದ-ಚಂದದ ಕುಣಿದಾಟವೇ ನಡೆಯಿತು.

ರಾಮನೂ ಅವನ ಪತ್ನಿಯಾದ ಸೀತೆಯೂ ಗಹಗಹಿಸಿ ನಕ್ಕರು. ಅವನ ಬಂಧುವಾದ ಲಕ್ಷ್ಮಣನಿಗೂ ತನ್ನ ನಗೆಯನ್ನು ತಡೆಯಲಾಗಲಿಲ್ಲ.

ಕೇವಲ ವೀರಪುರುಷರೇ ಈ ಪ್ರಕಾರ ನಗಬಲ್ಲರು. ಶುದ್ಧವೂ ಸರಲವೂ ಆದ ಆನಂದದ ಹೊರತು ಇನ್ನಾವುದು ಪ್ರಿಯವಾಗಬಲ್ಲದು? ವಾಸ್ತವದಲ್ಲಿ ಉತ್ಸಾಹ ಹಾಗೂ ಸಾಹಸಗಳ ಮೂಲದಲ್ಲಿ ಒಂದೇ ಭಾವನೆಯು ಕಾರ್ಯ ಮಾಡುತ್ತಿರುತ್ತದೆ. ಜೀವನದ ಕಠಿಣ ಕ್ಷಣದಲ್ಲಿ ಪ್ರಸನ್ನತೆಯನ್ನು ಕಾಪಾಡಿಕೊಂಡಿರುವುದೇ ಒಂದು ಬಗೆಯ ಸಾಹಸವಾಗಿರುತ್ತದೆ. ಹಾಗೂ ಅದು ಮುದಿತ ಸ್ವಭಾವದ ಅಂಗವಾಗಿರುತ್ತದೆ.

ಪ್ರತಿಯೊಂದು ಸಮಯದಲ್ಲಿ ನಿಶ್ಚಯವಾಗಿ ನಗುವ ಆವಶ್ಯಕತೆಯಿಲ್ಲ. ಆದರೆ ಜೀವನವು ಅದೆಷ್ಟು ಪ್ರಮಾಣದಲ್ಲಿ ಪ್ರಸನ್ನ ಗಂಭೀರಭಾವವುಳ್ಳದ್ದೂ ಸಂತೋಷಪೂರ್ಣ ಸ್ವಭಾವವುಳ್ಳದ್ದೂ ಆಗುವುದೋ ಅಷ್ಟು ಒಳ್ಳೆಯದು. ಅದು ಯಾವ ಗುಣಗಳ ಪ್ರಭಾವವಾಗಿರಬಲ್ಲದೆಂದರೆ— ತಾಯಿಯು ಮನೆಯನ್ನು ಮಕ್ಕಳ ಸಲುವಾಗಿ ಆನಂದಮಯ ಮಾಡಿಕೊಡುತ್ತಾಳೆ. ಒಬ್ಬ ದಾಯಿಯು ರೋಗವನ್ನು ಶೀಘ್ರವಾಗಿಯೇ ದೂರಗೊಳಿಸುವುದರಲ್ಲಿ ಸಫಲಳಾಗುತ್ತಾಳೆ. ಸ್ವಾಮಿಯು ತನ್ನ ಸೇವಕರ ಕೆಲಸವನ್ನು ಸುಲಭಗೊಳಿಸುತ್ತಾನೆ. ಒಬ್ಬ ಶ್ರಮಜೀವಿಯು ತನ್ನ ಸಂಗಡಿಗರಲ್ಲಿ ಸದ್ಭಾವನೆಯನ್ನು ಹುಟ್ಟಿಸುತ್ತಾನೆ. ಪ್ರಯಾಣಿಕನು ತನ್ನ ಜೊತೆಗಾರರ ಬೇಸರದ ಪ್ರಯಾಣ

ದಲ್ಲಿ ಸುಖವನ್ನು ತುಂಬುತ್ತಾನೆ. ಒಬ್ಬ ನಾಗರಿಕನು ಅನ್ಯ ನಾಗರಿಕ ಹೃದಯುವಲ್ಲಿ ಆಶೆಯನ್ನು ಮೊಳೆಸಿಡುತ್ತಾನೆ.

ಪ್ರಸನ್ನಚಿತ್ತರಾದ ಓ ಬಾಲಕ–ಬಾಲಕಿಯರೇ, ನೀವು ನಿಮ್ಮ ಪ್ರಫುಲ್ಲತೆ ಯಿಂದ ಏನು ಮಾಡಲಾರಿರಿ ?

# ಸ್ವಾವಲಂಬನ

ಪ್ರಾಚೀನಕಾಲದ ಅರಬೀಜನರಲ್ಲಿ ಹಾತೀಮತಾಯಿಯು ತನ್ನ ಉದಾರತೆಯ ಸಲುವಾಗಿಯೂ, ದಾನಶೀಲತೆಯ ಸಲುವಾಗಿಯೂ ಬಹು ಪ್ರಸಿದ್ಧನಾಗಿದ್ದನು.

ಒಮ್ಮೆ ಅವನ ಮಿತ್ರರು ಅವನನ್ನು ಕೇಳಿದರು—ನಿನಗಿಂತ ಹೆಚ್ಚು ಉದಾರರಾದ ಮನುಷ್ಯರು ನಿನಗೆಂದಾದರೂ ಸಿಕ್ಕಿರುವರೇ ?

"ಆಹುದು" ಎಂದವನು ಮರುನುಡಿದನು.

"ಅವರು ಯಾರು ?"

"ಒಮ್ಮೆ ನಾನೊಂದು ಔತಣವನ್ನಿತ್ತಿನು. ಅದರ ಸಲುವಾಗಿ ನಾಲ್ವತ್ತು ಒಂಟೆಗಳನ್ನು ಕೊಯ್ಯಲಾಗಿತ್ತು. ಯಾರು ಬೇಕಾದವರು ಆ ಆಮಂತ್ರಣದಲ್ಲಿ ಸಹಭಾಗಿಗಳಾಗಬಹುದಿತ್ತು. ನಾನು ನನ್ನ ಕೆಲವು ಸರದಾರರನ್ನು ಕರಕೊಂಡು ದೂರದ ಅತಿಥಿಗಳನ್ನು ಆಮಂತ್ರಿಸಲು ಹೊರಟೆನು. ದಾರಿಯಲ್ಲಿ ನನಗೊಬ್ಬ ಕಟ್ಟಿಗೆಯವನು ಸಿಕ್ಕನು. ಅವನು ತನ್ನ ಮಾರಾಟಕ್ಕಾಗಿ ರಭಸದಿಂದ ಬೆಳೆದ ಒಂದು ಗಿಡದ ಕಟ್ಟಿಗೆಗಳನ್ನು

ಕಡಿದು ಮುಗಿಸಿದ್ದನು. ಅವನ ಉಪಜೀವನದ ಸಾಧನವು ಅದೇ ಆಗಿತ್ತು. ಆ ಬಡವನನ್ನು ನೋಡಿ ನಾನು— "ಹಾತೀಮತಾಯಿಯು ಇಷ್ಟೊಂದು ಔತಣ ಕೊಡುತ್ತಿದ್ದಾನೆ. ನೀನು ಅಲ್ಲಿಗೆ ಯಾಕೆ ಹೋಗುವದಿಲ್ಲ? " ಎಂದು ಕೇಳಿದೆನು. ಅವನು ಮಾರುನುಡಿದದ್ದೇನಂದರೆ— "ಯಾವನು ತನ್ನ ರೊಟ್ಟಿಯನ್ನು ತಾನು ಸಂಪಾದಿಸುವನೋ ಅವನಿಗೆ ಹಾತೀಮತಾಯಿಯ ಔದಾರ್ಯದ ಆವಶ್ಯಕತೆಯಿಲ್ಲ."

ಹಾತೀಮತಾಯಿಯು ಹೀಗೇಕೆ ಹೇಳಿದನು? ಆ ಕಟ್ಟಿಗೆಯುವನು ತನಗಿಂತ ಒಳ್ಳೆಯ ಮನುಷ್ಯನಿದ್ದನೇ?

ಕಾಣಿಕೆಯೆಂದು ಹೆರರಿಗೇನಾದರೂ ಕೊಡುವುದಕ್ಕಿಂತ ಸ್ವಂತದ ಕೆಲಸ ಮಾಡಿಕೊಂಡು ತನ್ನ ಆವಶ್ಯಕತೆಗಳನ್ನು ಪೂರಯಿಸಿಕೊಳ್ಳುವುದು ಅವನಿಗೆ ತುಸು ಒಳ್ಳೆಯದೆನಿಸಿತು. ಯಾಕೆಂದರೆ ತೆಗೆದುಕೊಳ್ಳುವವರಿಗೆ ಅವರಲ್ಲಿ ಏನೂ ಪರಿಶ್ರಮವಾಗುವದಿಲ್ಲ. ಹಾಗೂ ಅವರ ಸಲುವಾಗಿ ಅವರು ಯಾವ ತ್ಯಾಗವನ್ನೂ ಮಾಡುವದಿಲ್ಲ. ಇಷ್ಟೇ ಅಲ್ಲ; ಆ ವರ್ತನವು ಪರರನ್ನು ಅವಲಂಬಿಸುವ ಪಾಠವನ್ನು ಹೆರವರಿಗೂ ಕಲಿಸುತ್ತದೆ.

ಇರಲಿ. ಒಬ್ಬನು ತನ್ನ ಮಿತ್ರನಿಗೆ ಕಾಣಿಕೆ ಕೊಡುವುದೇನೋ ಸ್ವಾಭಾವಿಕವೇ ಆಗಿದೆ. ಬಲಶಾಲಿಯು ದೀನದುಃಖಿಯಾದ ಮನುಷ್ಯನಿಗೆ ಸಹಾಯ ಮಾಡುವುದಕ್ಕಾಗಿ ಮುಂದುವರಿಯಬೇಕೆನ್ನುವುದೂ ಒಳ್ಳೆಯದೇ. ಆದರೆ ಒಬ್ಬ ಬಲಿಷ್ಠನೂ ಚಟುವಟಿಕೆಯುಳ್ಳವನೂ ಆದ ಮನುಷ್ಯನು ತನ್ನ ಕೈಯಿಂದಲೇ ಕೆಲಸ ಮಾಡುವುದು ಒಳ್ಳೆಯದು. ದಾನ ತಕ್ಕೊಳ್ಳುವ ಸಲುವಾಗಿ ಹೆರರ ಮುಂದೆ ಕೈಚಾಚುವುದು ಒಳ್ಳೆಯದಲ್ಲ. ಇರಲಿ. ಯಾರು ತಮ್ಮ ಜೀವನವನ್ನು ಸತ್ಯಸಂಶೋಧನ ಹಾಗೂ ಗಂಭೀರ ವಿಚಾರಗಳಲ್ಲಿಯೇ ಕಳೆಯುವರೋ ಅವರ ಮಾತು ಬೇರೆ. ಅವರು ನಿಸ್ಸಂಕೋಚವಾಗಿ ಹೆರರ ಕೊಡುಗೆಗಳನ್ನು ಸ್ವೀಕರಿಸಬಲ್ಲರು.

ಕಟ್ಟಿಗೆಯುವನ ನಡಪಳಿಕೆಯು ಅದೆಷ್ಟು ಒಳ್ಳೆಯದಾದರೂ ಇರಾಣದ ಗುಶ್ತಾಸ್ಪನದು ಅವನಿಗಿಂತಲೂ ಹೆಚ್ಚಿನದಾಗಿದೆ. ಆವನ ಕಥೆ ಹೀಗಿದೆ—

ಪ್ರಾಚೀನಕಾಲದಲ್ಲಿ ಗುಶ್ತಾಸ್ಪ ಎಂಬ ರಾಜಕುಮಾರನಿದ್ದನು. ಅವನ ತಂದೆಯು ಅವನನ್ನು ರಾಜಸಿಂಹಾಸನದಿಂದ ವಂಚಿತಗೊಳಿಸಿದನು. ಅದರಿಂದ ಅವನು ಬಹಳ ದುಃಖಿತನಾದನು. ಮತ್ತು ತನ್ನ ಜನ್ಮಭೂಮಿಯನ್ನು ಬಿಟ್ಟು ಪಶ್ಚಿಮದ ಕಡೆಗೆ ನಡೆದನು. ಒಂಟಿಗನೂ ಹಸಿದು ನೀರಡಿಸಿದವನೂ ಆದ ಗುಶ್ತಾಸ್ಪನು, ಜೀವನದ ಸಲುವಾಗಿ ತನ್ನ ಬಾಹುಬಲವನ್ನೇ ಅವಲಂಬಿಸ ಬೇಕಾಗುವದೆಂದು ತಿಳಕೊಂಡುಬಿಟ್ಟನು. ಆವನು ತಲುಪಿದ ದೇಶದ ಪ್ರಮುಖನ ಬಳಿಗೆ ಹೋಗಿ—"ನಾನೊಬ್ಬ ಜಾಣನಾದ ಲೇಖಕನು. ನೀನು ಕೃಪೆಮಾಡಿ ನನ್ನನ್ನು ಯಾವುದಾದರೂ ಕರಣಿಕ ಕೆಲಸಕ್ಕೆ ತೆಗೆದುಕೊಳ್ಳಿರಿ" ಎಂದು ನುಡಿದನು. ಪ್ರಮುಖನಿಗೆ ಆ ಸಮಯಕ್ಕೆ ಯಾವ ಲೇಖಕನ ಅವಶ್ಯ ಕತೆಯೂ ಇರಲಿಲ್ಲವಾದ್ದರಿಂದ ಅವನು ಗುಶ್ತಾಸ್ಪನಿಗೆ ಕೆಲವು ದಿನ ತಡೆಯ ಲಿಕ್ಕೆ ಹೇಳಿದನು ಆದರೆ ಅವನು ಅದೆಷ್ಟು ಹಸಿದಿದ್ದನೆಂದರೆ ಪ್ರತೀಕ್ಷಿಸು ವುದು ಅವನಿಗೆ ಶಕ್ಯವೇ ಇರಲಿಲ್ಲ. ಅಲ್ಲಿಂದ ಹೊರಟು ಅವನು ಕೆಲವು ಕಾರವಾನರ ಬಳಿಗೆ ಹೋಗಿ ಯಾವುದಾದರೂ ಕೆಲಸ ಕೊಡಿರೆಂದು ಅವರನ್ನು ಪ್ರಾರ್ಥಿಸಿದನು. ಅವರಿಗೂ ಇನ್ನಾವ ಹೊಸ ಮನುಷ್ಯನ ಆವಶ್ಯಕತೆ ಯಿರಲಿಲ್ಲ. ಆದರೆ ಅವನ ದರಿದ್ರತೆಯನ್ನೂ ಗತಿಗೇಡಿತನವನ್ನೂ ಕಂಡು ಅವರು ಅವನಿಗೆ ತುಸು ತಿನ್ನಲಿಕ್ಕೆ ಕೊಟ್ಟರು.

ಸ್ವಲ್ಪ ದೂರ ಮುಂದೆ ಹೋಗಿ ಗುಶ್ತಾಸ್ಪನು ಒಬ್ಬ ಕಮ್ಮಾರನ ಎದುರಿಗೆ ನಿಂತನು. ಮತ್ತು ಕಮ್ಮಾರನಿಗೆ ಕೆಲಸ ಕೇಳಿದನು.

ಕಮ್ಮಾರನು—"ಬಾ. ನೀನು ನನಗೆ ಈ ಕಬ್ಬಿಣವನ್ನು ಬಡಿಯಲಿಕ್ಕೆ ನೆರವಾಗಬಲ್ಲಿ" ಎಂದು ನುಡಿದು ಒಂದು ಸುತ್ತಿಗೆಯನ್ನು ಗುಶ್ತಾಸ್ಪನ ಕೈಯ ಲಿಒಪಿಸಿದನು.

ರಾಜಕುಮಾರನಲ್ಲಿ ಬಹಳ ಬಲವಿತ್ತು. ಅವನು ಆ ದೊಡ್ಡ ಸಮಟಿಗೆಯನ್ನು ಎತ್ತಿಹಿಡಿದು ಒಂದು ಏಟು ಕೊಟ್ಟನು. ಮೊದಲ ಪೆಟ್ಟಿಗೇ ಅಡಿಗಲ್ಲು ಎರಡು ತುಣುಕು ಆಯಿತು. ಸಿಟ್ಟಿನಿಂದ ತುಂಬಿದ ಕಮ್ಮಾರನು ಆಗಲೇ ಅವನಿಗೆ ಬಾಗಿಲ ದಾರಿ ತೋರಿಸಿಬಿಟ್ಟನು.

ಅತ್ಯಂತ ಗಂಭೀರವಾದ ವ್ಯಥೆಯಲ್ಲಿಯೂ, ಶೋಕದಲ್ಲಿಯೂ ಮುಳುಗಿದ ಗುಶ್ತಾಸ್ಪನು ಪುನಃ ಕೆಲಸ ಹುಡುಕುವುದಕ್ಕೆ ಹೊರಬಿದ್ದನು. ಎಲ್ಲಿ ಹೋದರೂ ಅವನು ನಿರುಪಯೋಗಿಯೆಂದೇ ನಿಶ್ಚಯವಾಯಿತು. ಕೊನೆಯಲ್ಲಿ ಅವನು ಒಬ್ಬ ಒಕ್ಕಲಿಗನನ್ನು ಕಂಡನು. ಅವನು ಒಂದು ಧಾನ್ಯದ ಹೊಲದಲ್ಲಿ ಕೆಲಸ ಮಾಡುತ್ತಿದ್ದನು. ಗುಶ್ತಾಸ್ಪನ ಅವಸ್ಥೆಯನ್ನು ಕಂಡು ಅವನಿಗೆ ದಯೆ ಬಂತು. ಅವನು ಆತನಿಗೆ ಇರಲಿಕ್ಕೂ ತಿನ್ನುಣ್ಣುವುದಕ್ಕೂ ಅನುಕೂಲ ಮಾಡಿಕೊಟ್ಟನು.

ಒಂದು ದಿನ ರೂಮದ ರಾಜನ ಮಗಳು ವಿವಾಹಯೋಗ್ಯಳಾಗಿದ್ದಾಳೆಂಬ ಸುದ್ದಿ ಬಂದಿತು. ರಾಜವಂಶದ ಯುವಕರೆಲ್ಲರೂ ಆ ಉತ್ಸವದಲ್ಲಿ ಆಮಂತ್ರಿತರಾದರು. ಗುಶ್ತಾಸ್ಪನೂ ಅಲ್ಲಿಗೆ ಹೋಗುವ ನಿಶ್ಚಯಮಾಡಿದನು. ಎಲ್ಲರ ನಡುವೆ ಅವನೂ ಮೇಜಿನ ಎದುರಿಗೆ ಹೋಗಿ ಕುಳಿತನು. ರಾಜಕುಮಾರಿಯ ಹರಿಕಾರನು ಆತನನ್ನು ಕಂಡು ಮೋಹಿತನಾಗಿಬಿಟ್ಟನು. ತನ್ನ ಅನುರಾಗದ ದ್ಯೋತಕವೆಂದು ಗುಲಾಬಿ ಹೂವಿನ ಗುಚ್ಛವೊಂದನ್ನು ಅವನಿಗೆ ಕಾಣಿಕೆ ಕೊಟ್ಟನು.

ಗುಶ್ತಾಸ್ಪನ ದರಿದ್ರತೆಯ ಸಲುವಾಗಿ ರಾಜನು ತೀವ್ರವಾದ ಅರುಚಿಯನ್ನು ತೋರ್ಪಡಿಸಿದನು. ಆದರೆ ಅವನು ಅದರಿಂದ ತನ್ನ ಮಗಳ ಮದುವೆಯನ್ನು ನಿಲ್ಲಿಸಿಬಿಡುವ ಸಾಹಸ ಮಾಡಲಿಕ್ಕೆ ಸಾಧ್ಯವಿರಲಿಲ್ಲ. ಹೇಗೋ ಅವರ ಮದುವೆ ಮಾಡಿ ಮುಗಿಸಿದನು. ರಾಜನು ಅವರನ್ನು ತನ್ನ ಮಂದಿರದಿಂದ ಹೊರಡಿಸಿಬಿಟ್ಟನು. ಅವರಿಬ್ಬರೂ ಅರಣ್ಯದಲ್ಲಿರಬೇಕೆಂದು

ಹೊರಬಿದ್ದರು. ಅಲ್ಲಿ ಅವರು ನದಿಯ ಹತ್ತಿರವೇ ತಮ್ಮ ಸಲುವಾಗಿ ಒಂದು ಗುಡಿಸಲವನ್ನು ಕಟ್ಟಿಕೊಂಡರು.

ಗುಶ್ತಾಸ್ಪನು ಒಳ್ಳೆಯ ದೊಡ್ಡ ಬೇಟೆಗಾರನಾಗಿದ್ದನು. ದಿನಾಲು ಅವನು ನಾವೆಯ ಮೇಲೆ ನದಿಯನ್ನು ದಾಟಿ ಅಲ್ಲಿಂದ ಒಮ್ಮೆ ಕಡವೆಗಳನ್ನೂ ಇನ್ನೊಮ್ಮೆ ಕಾಡುಕತ್ತೆಗಳನ್ನೂ ಹಿಡಕೊಂಡು ತರುವನು. ತನ್ನ ಬೇಟೆಯೊಳಗಿಂದ ಅರ್ಧವನ್ನು ಅಂಬಿಗರಿಗೆ ಕೊಟ್ಟು ಉಳಿದುದನ್ನು ತನ್ನ ಹೆಂಡತಿಯ ಬಳಿಗೆ ತಕ್ಕೊಂಡು ಬರುತ್ತಿದ್ದನು.

ಒಂದು ದಿನ ನಾವಿಕನು ಮಾಬರೀನ ಎಂಬ ಹೆಸರಿನ ಒಬ್ಬ ಯುವಕನನ್ನು ತನ್ನ ಸಂಗಡ ಕರೆತಂದನು. ಅವನು ಗುಶ್ತಾಸ್ಪನನ್ನು ಕಾಣಬಯಸುತ್ತಿದ್ದನು. ಮಾಬರೀನನು ನುಡಿದದ್ದೇನಂದರೆ— "ನಾನು ರಾಜನ ಮರುಚಲ ಮಗಳು ಅಂದರೆ ನಿನ್ನ ಹೆಂಡತಿಯ ತಂಗಿಯೊಡನೆ ಮದುವೆಯಾಗಬೇಕೆನ್ನುತ್ತೀನೆ. ರಾಜನ ದೇಶದಲ್ಲಿ ಒಂದು ಕರಡಿಯು ಬಹಳ ಕಾಟ ಕೊಡುತ್ತಿದೆ. ನಾನು ಅದನ್ನು ಕೊಂದು ಹಾಕುವವರೆಗೆ ಆ ಹುಡಿಗೆಯೊಡನೆ ನನ್ನ ಮದುವೆಯಾಗಲಾರದು. ನಾನು ಹೇಗೆ ಮಾಡಬೇಕೆನ್ನುವುದು ನನಗೆ ತಿಳಿಯಲೊಲ್ಲದು."

ಬೇಟೆಗಾರನಾದ ಗುಶ್ತಾಸ್ಪನು— "ನಿನ್ನ ಸಲುವಾಗಿ ಆ ಕೆಲಸವನ್ನು ನಾನು ಮಾಡಿಕೊಡುವೆನು" ಎಂದು ಮರುನುಡಿದನು.

ಅವನು ಅರಣ್ಯದ ಕಡೆಗೆ ಹೊರಟನು. ಅಲ್ಲಿ ಅವನು ಕರಡಿಯನ್ನು ನೋಡಿದನು. ಎರಡು ಬಾಣಗಳನ್ನು ಅದಕ್ಕೆ ಹೊಡೆದು ಬಳಿಕ ತನ್ನ ಬೇಟೆಯ ಚಾಕುವಿನಿಂದ ಅದರ ಕತ್ತನ್ನು ಕತ್ತರಿಸಿದನು.

ರಾಜನು ಸತ್ತುಬಿದ್ದ ಪ್ರಾಣಿಯನ್ನು ನೋಡುವುದಕ್ಕೆ ಬಂದನು. ಅವನು ಸಂತೋಷಪೂರ್ವಕವಾಗಿ ತನ್ನ ಮರುಚಲ ಮಗಳನ್ನು ಮಾಬರೀನನಿಗೆ ಕೊಟ್ಟುಬಿಟ್ಟನು.

ಕೆಲವು ದಿನಗಳಾದ ಬಳಿಕ ಅಂಬಿಗನು ಬೇರೊಬ್ಬ ಯುವಕನನ್ನು ಗುಶ್ತಾಸ್ಪನ ಬಳಿಗೆ ಕರೆತಂದನು. ಅವನ ಹೆಸರು ಅಹೆರುನ. ಅವನು ರಾಜನ ಮೂರನೇ ಮಗಳನ್ನು ಮದುವೆಯಾಗಲು ಇಚ್ಛಿಸುತ್ತಿದ್ದನು. ಆದರೆ ಅದಕ್ಕೂ ಮೊದಲು ಅವನು ಒಂದು ಅಜಗರ ಹಾವನ್ನು ಹೊಡೆಯಬೇಕಿತ್ತು. ಗುಶ್ತಾಸ್ಪನು ಆ ಹೊಸ ದುಷ್ಕರ ಕಾರ್ಯವನ್ನು ಮಾಡುವ ಬಗ್ಗೆ ಅವನಿಗೂ ಮಾತು ಕೊಟ್ಟುಬಿಟ್ಟನು.

ಅವನು ಚೂರಿಗಳಿಂದ ಒಂದು ಚೆಂಡು ರಚಿಸಿದನು. ಅದರ ಸುತ್ತಲೂ ಹರಿತವಾದ ಮೊಳೆಗಳನ್ನು ಬಡಿಯಲಾಯಿತು. ಬಳಿಕ ಆ ಹಾವನ್ನು ಹುಡುಕುವದಕ್ಕೆ ಹೊರಟನು. ಅಡವಿಗೆ ಹೋಗಿ ಗುಶ್ತಾಸ್ಪನು ನೋಡಿದರೆ ಹಾವಿನ ಶ್ವಾಸದಿಂದ ಬೆಂಕಿ ಹೊರಡುತ್ತಿದ್ದಿತು. ಅವನು ಅದರ ದೇಹದಲ್ಲಿ ಬಹಳಷ್ಟು ಬಾಣಗಳನ್ನು ನಿಲ್ಲಿಸಿದನು. ಅದು ಅವನ ಮುಷ್ಟಿಯೊಳಗಿಂದ ಉಳಿದುಕೊಳ್ಳುವ ಸಲುವಾಗಿ ಅತ್ತ ಇತ್ತ ಜಿಗಿದಾಡುತ್ತಿತ್ತು. ಆದರೂ ಅವನು ಒಂದು ಬರಚಿಯ ತುದಿಗೆ ಚೂರಿಗಳ ಚೆಂಡು ಸಿಕ್ಕಿಸಿ ಅದನ್ನು ಹಾವಿನ ತೆರೆದ ಬಾಯಲ್ಲಿ ತುರುಕಿದನು. ಅದು ತನ್ನ ಬಾಯಿ ಮುಚ್ಚಿಕೊಂಡು ಹೊರಳಿಬಿತ್ತು. ಆಗ ರಾಜಕುಮಾರನು ತನ್ನ ಕೈಗತ್ತಿಯಿಂದ ಅದರ ಕೆಲಸವನ್ನು ಮುಗಿಸಿದನು.

ಈ ಪ್ರಕಾರವಾಗಿ ಅಹೆರುನನಿಗೆ ರಾಜನ ಮೂರನೇ ಮಗಳು ಸಿಕ್ಕುಬಿಟ್ಟಳು.

ಮುಂದೆ ಶೀಘ್ರವೇ ಆ ವೀರನಾದ ರಾಜಕುಮಾರನು ಉತ್ತರಾಧಿಕಾರಿಯ ರೂಪದಲ್ಲಿ ಇರಾಣದ ರಾಜನಾದನೆಂಬುದನ್ನು ತಿಳಿದು ನೀವು ಚಕಿತರಾಗ-ಲಾರಿರಿ. ಗುಶ್ತಾಸ್ಪನ ರಾಜ್ಯಕಾಲದಲ್ಲಿಯೇ ಜರದುಶ್ತ ಇಲ್ಲವೆ ಜೊರೋಸ್ಟರ ಎಂಬ ಹೆಸರಿನ ಪಾರಸೀ ಸತ್ಪುರುಷನಿದ್ದನು. ಅವನು ಇರಾಣೀ ಜನರಿಗೆ ಅಹುರ್ಮಜ್ದ ಎಂಬ ಧರ್ಮವನ್ನು ಕಲಿಸಿದನು. ಅಹುರ್ಮಜ್ದವೆಂದರೆ

ಪ್ರಕಾಶ, ಸೂರ್ಯ, ಅಗ್ನಿ, ಸಭ್ಯತೆ ಹಾಗೂ ನ್ಯಾಯ ಇವುಗಳ ಪ್ರಭುವೆಂದು ತಿಳಿಯಲಾಗುತ್ತದೆ.

*     *     *     *

ಗುಶ್ತಾಸ್ಪನಿಗೆ ಜಗತ್ತಿನಲ್ಲಿ ಒಮ್ಮೆಲೆ ಸ್ಥಾನವೂ ಸಿಗಲಿಲ್ಲ. ಕೆಲಸವೂ ಸಿಗಲಿಲ್ಲವೆಂಬುದನ್ನು ನೀವು ಕಂಡುಕೊಂಡೇ ಇರುವಿರಿ. ಅವನು ಕೆಲಸಗಳ ಸಲುವಾಗಿ ಅದೆಷ್ಟೋ ಪ್ರಯತ್ನಿಸಿ ವಿಫಲನಾದನು. ಇಷ್ಟೇ ಅಲ್ಲ; ಮೊದಮೊದಲಿಗಾದರೋ ಅವನು ಕೆಲವು ಜನರ ಅಂದರೆ ಆ ಕಮ್ಮಾರ ನಂಥವರ ತಿರಸ್ಕಾರಕ್ಕೂ ಕಾರಣನಾದನು.

ಕೊನೆಯಲ್ಲಿ ಅವನಿಗೆ ತನ್ನ ಪದವಿಯು ಪ್ರಾಪ್ತವಾಗಿಬಿಟ್ಟಿತು. ಮತ್ತು ಈ ಪ್ರಕಾರ ಅವನು ಪ್ರಜೆಗಳನ್ನು ಬುದ್ಧಿವಂತಿಕೆಯಿಂದ ಆಳಿ ಅವರಿಗೆ ಸಹಾಯ ಮಾಡುವುದಕ್ಕೆ ಸಮರ್ಥನಾದನು.

ನಾನು ಇದೇ ಈಗ ಹೇಳಿದ ಕಟ್ಟಿಗೆಯವನು ಇದೇ ವಿಷಯದಲ್ಲಿ ಬಲ್ಲಿದನಾಗಿದ್ದನು. ಯಾಕಂದರೆ ಅವನು ಹೆರರಿಗೆ ಸಹಾಯ ಮಾಡುತ್ತಿದ್ದನು. ಯಾವಾಗ ? ಕಟ್ಟಿಗೆಯವನು ಕೇವಲ ತನ್ನ ಸಲುವಾಗಿ ಕೆಲಸ ಮಾಡುತ್ತಿದ್ದಾಗ. ಗುಶ್ತಾಸ್ಪನು ಉದಾರನಾದ ಹಾತೀಮತಾಯಿಗಿಂತಲೂ ಶ್ರೇಷ್ಠನು. ಯಾಕಂದರೆ ಅವನಂತೆ ತನ್ನ ಹೊರತಾಗಿ ದ್ರವ್ಯವನ್ನು ಕೊಟ್ಟುಬಿಡುವ ಬದಲು ಇರಾಣದ ರಾಜಕುಮಾರನು ತನ್ನ ಬಾಹುಬಲವನ್ನು ಕೊಟ್ಟನು. ಹಾಗೂ ಹೆರರ ಕಲ್ಯಾಣದ ಸಲುವಾಗಿ ತನ್ನ ಪ್ರಾಣವನ್ನು ಸಹ ಗಂಡಾಂತರದಲ್ಲಿ ಹಾಕಿಬಿಟ್ಟನು.

ಯಾವಾತನು ತನ್ನನ್ನೇ ಅವಲಂಬಿಸಿ ತನ್ನ ಶಕ್ತಿಯಿಂದ ಕೇವಲ ತನ್ನ ಆವಶ್ಯಕತೆಗಳನ್ನು ಮಾತ್ರ ಪೂರ್ತಿಗೊಳಿಸಿಕೊಳ್ಳಲಾರದೆ ಅದರೊಂದಿಗೆ ತನ್ನ ನೆರೆಯವರ ಸಮೃದ್ಧಿ ಹಾಗೂ ಕಲ್ಯಾಣಗಳನ್ನು ಬೆಳೆಸುತ್ತಾನೋ ಅವನಷ್ಟು ಸನ್ಮಾನಯೋಗ್ಯರು ಮತ್ತಾರೂ ಅಲ್ಲ.

ಯಾರು ತಮ್ಮ ಕಾರ್ಯಗಳಿಂದ ತಮ್ಮ ನೆರೆಯವರ ಸುಖಸಮೃದ್ಧಿಗಳಿಗೆ ಕಾರಣರಾಗುವರೋ ಅವರೆಲ್ಲರ ಮುಂದೆ ನಾನು ತಲೆಬಾಗಿಸುತ್ತೇನೆ; ಅವನು ಧರ್ಮಾಚಾರ್ಯನಿರಲಿ, ಇಂಜನಿಯರನಿರಲಿ ಇಲ್ಲವೆ ಕಟ್ಟಿಗೆ ಮಾರುವವನಿರಲಿ, ಲೇಖಕನಿರಲಿ, ಕೈಕೂಲಿಯುವನಿರಲಿ, ಒಕ್ಕಲಿಗ ಕಮ್ಮಾರ ಆಡಳಿತಗಾರ ಯಾರೇ ಇರಲೊಲ್ಲರೇಕೆ. ಯಾರು ತಮ್ಮ ಹಾಗೂ ತಮ್ಮೊಡನೆ ತಮ್ಮ ಸಂಗಡಿಗರ ಲಾಭದ ಸಲುವಾಗಿ ಪಾಲಿನ ಕಾರಖಾನೆ, ಅಂಗಡಿ, ಕಂಪನಿ ಹಾಗೂ ಸಿಂಡಿಕೇಟಗಳನ್ನು ನಡೆಸುವರೋ ಪ್ರತಿ ಒಬ್ಬರಿಗೆ ತಮ್ಮ ಅಧಿಕಾರದ ಹಕ್ಕು ಬಾಧ್ಯತೆಗಳನ್ನು ಪಡೆಯಲು ಅನುಕೂಲಿಸುವರೋ ಅಂಥವರನ್ನು ನಾನು ಆದರಿಸುತ್ತೇನೆ. ಈ ಪ್ರಕಾರ ಒಬ್ಬ ಒಂಟಿಗನಾದ ವ್ಯಕ್ತಿಯ ದುರ್ಬಲ ಹಾಗೂ ಪ್ರಾರ್ಥಕಧ್ವನಿಯ ಸ್ಥಾನದಲ್ಲಿ ಸಮೂಹದ ಶಕ್ತಿಶಾಲಿಯಾದ ಧ್ವನಿಯು ಕೇಳಿಬರುತ್ತದೆ.

ಇಂಥ ಕಾರ್ಯನಿರತರಾದ ಪಾಲುಗಾರರು ಈ ಪ್ರಕಾರ ಶ್ರಮಜೀವಿಗಳಿಗೆ ತಮ್ಮ ಶಕ್ತಿಯ ಮೇಲೆ ಭರವಸೆಯಿಡುವುದಕ್ಕೂ ಒಬ್ಬರು ಇನ್ನೊಬ್ಬರಿಗೆ ಸಹಾಯ ಮಾಡುವುದಕ್ಕೂ ಕಲಿಸುತ್ತಾರೆ.

ವಿದ್ಯಾರ್ಥಿಗಳೇ, ನೀವು ಸಹ ಅಧ್ಯಾಪಕರಿಂದ ಕೊಡಲಾದ ಕೆಲಸದಲ್ಲಿ ನಿಮ್ಮ ಬುದ್ಧಿಯನ್ನು ಬೆಳೆಸುವ ಸಲುವಾಗಿ ಜ್ಞಾನಸೋಪಾನದ ಉಚ್ಚಾತಿಉಚ್ಚವಾದ ತುದಿಗೇರುತ್ತ ನೀವು ಯಾವಾಗಲೂ ನಿಮ್ಮ ಸಂಗಡಿಗರಿಗೆ ನೆರವಾಗುವ ಪ್ರಸಂಗವನ್ನು ಹುಡುಕಿರಿ. ಯಾಕಂದರೆ ಅವರು ನಿಮಗಿಂತ ಕಡಿಮೆ ತಿಳುವಳಿಕೆಯುಳ್ಳವರೂ ಮಂದರೂ ಆಗಿರುತ್ತಾರೆ.

ಯಕ್ಷಿಣಿ ಕಥೆಗಳಲ್ಲಿ ಕೇವಲ ಒಂದು ಹೆಸರು ತಕ್ಕೊಳ್ಳುವುದು, ಲೇಪನದಿಂದ ತಿಕ್ಕುವುದು, ಕೋಲು ತಿರುವುವುದು ಇವುಗಳಿಂದ ಭೂತವೊಂದು ಪ್ರಕಟವಾಗಿಬಿಡುವದು. ಅದು ಮನುಷ್ಯರನ್ನು ಮುಗಿಲಿಗೆತ್ತಿಕೊಂಡು ನೆಗೆಯುತ್ತದೆ. ಕಣ್ಣುಬಡಿದು ಮಂದಿರಗಳನ್ನು ಹುಟ್ಟಿಸುತ್ತದೆ.

ನೆಲದೊಳಗಿಂದ ಕುಮುರಿಸ್ವಾರರನ್ನೂ ಆನೆಯ ಮಾವುತರನ್ನೂ ಹೊರ ಪಡಿಸುತ್ತದೆ.

ಆದರೆ ಸ್ವಪ್ರಯತ್ನವು ಇವಕ್ಕಿಂತಲೂ ಹೆಚ್ಚು ಚಮತ್ಕಾರವನ್ನು ಹುಟ್ಟಿಸುತ್ತದೆ. ಅದು ಪೃಥಿವಿಯನ್ನು ಉತ್ತಮವಾದ ಬೆಳೆಯಿಂದ ಮುಚ್ಚಿಬಿಡುತ್ತದೆ. ಕಾಡಪಶುಗಳನ್ನು ವಶಪಡಿಸಿಕೊಡುತ್ತದೆ. ಪರ್ವತಗಳನ್ನು ಒಡೆದುಕೊಡುತ್ತದೆ. ಒಡ್ಡುಗಳನ್ನೂ ಹಾಯುಗಡಗಳನ್ನೂ ನಿರ್ಮಿಸಿಕೊಡುತ್ತದೆ. ನೀರಲ್ಲಿ ಹಡಗಿಗೂ ಆಕಾಶದಲ್ಲಿ ನಡೆಮಾಡುಗಳಿಗೂ ಗತಿ ಕೊಡುತ್ತದೆ. ಸರ್ವರಿಗೂ ಕಲ್ಯಾಣದ ಹಾಗೂ ಸುಸಂರಕ್ಷಣೆಯ ಇಷ್ಟೊಂದು ಸಾಧನಗಳನ್ನು ಅಣಿಗೊಳಿಸಿಕೊಡುತ್ತದೆ.

ಈ ಪ್ರಯತ್ನದಿಂದಲೇ ಮನುಷ್ಯನು ಹೆಚ್ಚು ಸಜ್ಜನನೂ, ಹೆಚ್ಚು ಯೋಗ್ಯನೂ, ಹೆಚ್ಚು ದಯಾಶೀಲನೂ ಆಗುತ್ತಾನೆ. ನಿಜವಾದ ಉನ್ನತಿಯು ವಾಸ್ತವಿಕವಾಗಿ ಇದರಲ್ಲಿಯೇ ಅದೆ.



# ಧೈರ್ಯ ಮತ್ತು ಸತತಪ್ರಯತ್ನ

ಪಂಜಾಬೀ ಜನರ ಒಂದು ಹಾಡು:—

ನಿತ್ಯವು ಕೂಗದು ಕೋಗಿಲೆ ವನದಿ
ನಿತ್ಯವು ಫಲಿಸದು ವನ ತಾ ಮುದದಿ
ನಿತ್ಯವು ಮುದಗೊಡನರಸನು ಜವದಿ
ನಿತ್ಯವು ಓಲಗ ನಡೆಯದು ಭರದಿ ॥

ಈ ಹಾಡಿನ ಭಾವವೇನಂದರೆ—ನಾವು ಯಾವಾಗಲೂ ಸಂತುಷ್ಟರಾಗಿರುವ ಆಶೆಯನ್ನು ಮಾಡಲಾರೆವು. ಹಾಗೂ ಧೈರ್ಯವೊಂದು ಅತ್ಯಂತ ಉಪಯೋಗಿಯಾದ ಗುಣವು. ನಾವು ಈ ಗುಣದ ಅನುಶೀಲನವನ್ನು ಮಾಡಲಿಕ್ಕೆ ಶಕ್ಯವಿಲ್ಲದಂಥ ದಿನಗಳು ನಮ್ಮ ಜೀವನದಲ್ಲಿ ಕಡಿಮೆಯಿಲ್ಲ.

ನಿಮಗೆ ಕಾರ್ಯದಲ್ಲಿ ಅತ್ಯಂತ ವ್ಯಸ್ತನಾದ ಒಬ್ಬ ವ್ಯಕ್ತಿಯಿಂದಾಗ ಬೇಕಾದ ಕೆಲಸವೊಂದಿಷ್ಟಿದೆ. ನೀವು ಅವನ ಮನೆಗೆ ಹೋಗುವಿರಿ. ಅಲ್ಲಿ ಮುಂಚಿತವಾಗಿಯೇ ಕಾಣಬೇಕೆನ್ನುವ ಕೆಲವರಿದ್ದಾರೆ. ಕಾಣುವುದಕ್ಕೆ ಮೊದಲು ಅವನು ನಿಮ್ಮನ್ನು ಬಹಳ ಹೊತ್ತು ಪರೀಕ್ಷಿಸಹಚ್ಚುತ್ತಾನೆ. ಆದರೆ ನೀವು ಅಲ್ಲಿ ಶಾಂತಿಪೂರ್ವಕವಾಗಿ ಕೆಲವೊಂದು ಗಂಟೆಗಳ ವರೆಗೆ ತಡೆದುಕೊಂಡಿರುತ್ತೀರಿ. ನೀವು ಧೈರ್ಯವಂತರು.

ಬೇರೊಂದು ಪ್ರಸಂಗದಲ್ಲಿ ನೀವು ಕಾಣಬೇಕಾದವರು ಆ ಸಮಯದಲ್ಲಿ ತಮ್ಮ ಮನೆಯಲ್ಲಿ ಇರುವದಿಲ್ಲ. ಮರುದಿನ ನೀವು ಮತ್ತೆ ಹೋಗುವಿರಿ. ಆದರೆ ಅವರ ಬಾಗಿಲು ಆಗಲೂ ಮುಚ್ಚಿರುವುದನ್ನು ಕಾಣುವಿರಿ. ಮೂರನೇ ಸಾರೆ ನೀವು ಮತ್ತೆಯೂ ಹೋಗುವಿರಿ. ಆಗ ಅವರಿಗೆ ಜಡ್ಡಾಗಿದ್ದರಿಂದ ಕಾಣಲು ಸಾಧ್ಯವಿಲ್ಲ. ನೀವು ಕೆಲವೊಂದು ದಿವಸ ಕಳೆಯುವಿರಿ. ಆ ಬಳಿಕ ಅವರ ಮನೆಯ ಹಾದಿಯನ್ನು ಮತ್ತೆ ಹಿಡಿಯುವಿರಿ. ಆಗ ಸಹ ಯಾವುದಾದರೂ ಹೊಸ ಘಟನೆಯು ಅವರನ್ನು ಕಾಣುವುದಕ್ಕೆ ತಡೆಯಾದರೆ ನೀವು ನಿರುತ್ಸಾಹಿಯಾಗುವದಿಲ್ಲ. ಆದರೆ ನೀವು ಅವರನ್ನು ಕಾಣದೆ ಇರುವ ವರೆಗೆ ನೀವು ನಿಮ್ಮ ಪ್ರಯತ್ನದಲ್ಲಿ ನಿರತರಾಗುವಿರಿ. ಈ ಪ್ರಕಾರದ ಧೈರ್ಯವು ಸತತ ಪ್ರಯತ್ನವೆನಿಸುತ್ತದೆ. ಸತತ ಪ್ರಯತ್ನವೆಂದರೆ ಕ್ರಿಯಾಶೀಲ ಧೈರ್ಯ—ಗತಿಶಾಲಿಯಾದ ಧೈರ್ಯ.

*   *   *   *

ಜೆನೆವಾದಲ್ಲಿ ಇರುತ್ತಿದ್ದ ಪ್ರಸಿದ್ಧ ನಾವಿಕನಾದ ಕೋಲಂಬಸನು ಸ್ಪೇನ ದಿಂದ ಹಡಗು ತಕ್ಕೊಂಡು ಪಶ್ಚಿಮದ ಅಜ್ಞಾತ ಸಮುದ್ರವನ್ನು ದಾಟಲು ಹೊರಟನು. ದಿನಗಳು ಕಳೆದವು. ವಾರಗಳು ಕಳೆದವು. ತನ್ನ ಸಂಗಡಿ ಗರ ಗೊಣಗಾಟವನ್ನು ಸಹಿಸುತ್ತ ಅವನು ಒಂದು ಹೊಸ ಭೂಮಿಯನ್ನು ಹುಡುಕಿತೆಗೆಯುವ ಹುಚ್ಚಿನಲ್ಲಿ ಗಟ್ಟಿಗೊಂಡನು. ವಿಲಂಬವಾಯಿತು; ಕೆಲವೊಂದು ಗಂಡಾಂತರಗಳು ಎದುರಿಸಿದವು. ಆದರೆ ಅವನು ಅಮೇರಿಕೆಯ ಆರಂಭದ ದ್ವೀಪಗಳನ್ನು ತಲಪುವವರೆಗೆ ದಣಿವಾರಿಸಿಕೊಳ್ಳಲಿಲ್ಲ. ಈ ಪ್ರಕಾರ ಅವನೊಂದು ಹೊಸ ಮಹಾದ್ವೀಪವನ್ನು ಹುಡುಕಿತೆಗೆದನು.

ಅವನು ತನ್ನ ಸಂಗಡಿಗರಿಂದ ಯಾವ ಮಾತಿನ ಆಶೆಯನ್ನಿಟ್ಟು ಕೊಂಡಿದ್ದನು? ಅವರು ಧೈರ್ಯದಿಂದ ಇರುವುದನ್ನು ಮಾತ್ರ ಅವರಿಂದ ಆಶಿಸುತ್ತಿದ್ದನು. ಕೇವಲ ಆತನ ಮೇಲೆ ಭರವಸೆಯಿಟ್ಟು ನಮ್ರತಾಪೂರ್ವಕ ವಾಗಿ ಆತನ ಅಪ್ಪಣೆಗೆ ಅಧೀನವಾಗಿರುವುದಷ್ಟೇ ಅವರ ಕರ್ತವ್ಯವಾಗಿತ್ತು.

ಆದರೆ ಆ ಗುರಿಯನ್ನು ಸಾಧಿಸುವ ಸಲುವಾಗಿ ಅವರೊಳಗೆ ಯಾವ ದೀನಸು ಅವಶ್ಯವಾಗಿ ಬೇಕಿತ್ತು? ಅವರಲ್ಲಿ ಹರಿಗಡಿಯದ ಉತ್ಸಾಹ ಹಾಗೂ ಗಂಭೀರವಾದ ಅಂಟಿಕೊಳ್ಳುವಿಕೆ ಇವುಗಳ ಆವಶ್ಯಕತೆಯಿತ್ತು. ಅದಕ್ಕೆ ನಾವು ಸತತ ಪ್ರಯತ್ನವೆನ್ನುತ್ತೇವೆ.

ಪ್ರಾಚೀನಕಾಲದ ಪಾತ್ರೆಗಳ ಮೇಲೆ ಮಿಂಚುಬಣ್ಣದಿಂದ ಯಾವ ಪಿಂಗಾಣಿಯ ಕೆಲಸವಾಗುತ್ತಿತ್ತೋ ಅದರ ಲುಪ್ತಭೇದವನ್ನು ತಾನು ಹುಡುಕಿತೆಗೆಯಬೇಕೆಂದು ಪ್ರಸಿದ್ಧ ಕುಂಭಕಾರನಾದ ಬರ್ನಾರ್ಡ ಪಾಲಿಸಿಯ ಇಚ್ಛೆಯಿದ್ದಿತು. ತನ್ನ ಈ ಸಂಶೋಧನವನ್ನು ಅವನು ದಣಿಯದೆ ತಿಂಗತಿಂಗಳು ವರುಷವರುಷ ನಡೆಸುತ್ತ ಬಂದನು. ಆ ಬಣ್ಣಗಳನ್ನು ಹುಡುಕಿತೆಗೆಯುವುದಕ್ಕೆ ಅವನ ಪ್ರಯತ್ನವು ಬಹುಕಾಲದವರೆಗೆ ನಿಷ್ಫಲವೇ ಆಗಿ ಉಳಿಯಿತು. ಅವನ ಹತ್ತಿರವಿದ್ದ ತುಸು ಆಸ್ತಿಯನ್ನೆಲ್ಲ ಅವನು ಇದೇ ಕಾರ್ಯಕ್ಕೆ ಅರ್ಪಿಸಿಬಿಟ್ಟನು. ಹಗಲು ರಾತ್ರಿಯೆನ್ನದೆ ಅವನು ತನ್ನ ಭಟ್ಟಿಯ ಮುಂದೆ ಹೊಸ ಹೊಸ ಕ್ರಿಯೆಗಳಿಂದ ಪಾತ್ರೆಗಳನ್ನು ಮಾಡುವ ಹಾಗೂ ಅವನ್ನು ಕುದಿಸುವ ಸತತ ಪ್ರಯತ್ನದಲ್ಲಿ ತೊಡಗಿರುತ್ತಿದ್ದನು. ಈ ಕೆಲಸದಲ್ಲಿ ಅವನಿಗೆ ಯಾರೂ ನೆರವಾಗುತ್ತಿರಲಿಲ್ಲ; ಅವನನ್ನು ಉತ್ಸಾಹಗೊಳಿಸುತ್ತಲೂ ಇರಲಿಲ್ಲ. ಆದರೆ ಅವನ ನೆರೆಯವರೆಲ್ಲ ಹಾಗೂ ಮಿತ್ರರೆಲ್ಲ ಅವನನ್ನು ಮರುಳನೆಂದು ತಿಳಿಯುತ್ತಿದ್ದರು. ಅವನ ಹೆಂಡತಿ ಸಹ ಅವನ ಕೆಲಸಕ್ಕೆ ಒಳಿತು ಕೆಡಕು ಅನ್ನುತ್ತಿದ್ದಳು.

ಹಣವಿಲ್ಲದಾಗ ಅವನು ಎಷ್ಟೋ ಸಾರೆ ತನ್ನ ಸಂಶೋಧನವನ್ನು ನಿಲ್ಲಿಸಿಬಿಡಬೇಕಾಗುತ್ತಿತ್ತು. ಆದರೆ ಅವನು ಆ ಪರೀಕ್ಷೆಯಲ್ಲಿ ತನ್ನಿಂದ ತಾನು ಸಮರ್ಥನಾಗುತ್ತ ಹೋದಂತೆ ಒಂದು ಹೊಸ ಉತ್ಸಾಹದಿಂದ ಮತ್ತೆ ಅದರಲ್ಲಿ ಅಂಟಿಕೊಳ್ಳುತ್ತಿದ್ದನು. ಕೊನೆಯಲ್ಲಿ ಭಟ್ಟಿಯನ್ನು ಕಾಯಿಸುವ ಸಲುವಾಗಿ ಅವನ ಮನೆಯಲ್ಲಿ ಒಮ್ಮೆ ಉರುವಲು ಇರಲಿಲ್ಲ. ಮನೆಯ ಜನರ ಕೂಗಾಟ ಬೊಬ್ಬಾಟಗಳ ಪರಿವೆಯನ್ನು ಎಷ್ಟೂ ಹಿಡಿಯದೆ ಅವನು ತನ್ನ

ಕಟ್ಟಿಗೆಯ ಸಾಮಾನುಗಳನ್ನೆಲ್ಲ ಒಂದೊಂದಾಗಿ ಬೆಂಕಿಯಲ್ಲಿ ಚಾಚಿಬಿಟ್ಟನು. ಇದ್ದುದೆಲ್ಲವೂ ಸುಟ್ಟುಹೋದ ಬಳಿಕ ಅವನು ಭಟ್ಟಿಯನ್ನು ತೆರೆದರೆ ಏನು ಕಾಣಿಸಿತೆಂದರೆ, ಯಾವ ಬಣ್ಣಗಳನ್ನು ಹುಡುಕುವುದರಲ್ಲಿ ಅವನಿಗೆ ಇಷ್ಟೊಂದು ವರುಷಗಳು ಬೇಕಾಗಿದ್ದವೋ ಅವೆಲ್ಲವೂ ಅಲ್ಲಿ ಜಗಜಗಿಸುತ್ತಿವೆ. ಕಡೆಯಲ್ಲಿ ಅವೇ ದಿನಸುಗಳು ಅವನ ಯಶಃಪ್ರಾಪ್ತಿಗೆ ಕಾರಣವಾದವು.

ಯಾವ ವಸ್ತುವಿನ ಅಭಾವದ ಕಾರಣದಿಂದ ಅವನ ಹೆಂಡತಿ ಹಾಗೂ ಮಿತ್ರರು ಅವನಿಗೆ ತಮ್ಮ ದುಡಿಮೆಯನ್ನು ಸಲ್ಲಿಸದಿದ್ದರೋ ಹಾಗೂ ಅವನ ಕೆಲಸವನ್ನು ಹೆಚ್ಚು ಬಿಗಿತರ ಮಾಡಿಬಿಟ್ಟರೋ ಆ ಕಾರಣದಿಂದಲೇ ಅವನ ಸಫಲತೆಯ ನಿಮಿಷವನ್ನು ಪ್ರತೀಕ್ಷಿಸದಿರಲಿಕ್ಕೆ ಶಕ್ಯವಾಗಲಿಲ್ಲ. ಆದರ ಹೊರತು ಇನ್ನಾವ ಧೈರ್ಯವೂ ಇರಲಿಲ್ಲ. ಯಾವುದರ ಅಭಾವವು ಅವನಲ್ಲಿರಲಿಲ್ಲವೋ, ಯಾವುದು ಕಡೆಯಲ್ಲಿ ಅವನಿಗೆ ಗಂಡಾಂತರ ಹಾಗೂ ವ್ಯಂಗ್ಯೋಕ್ತಿಗಳ ಮೇಲೆ ವಿಜಯವನ್ನು ದೊರಕಿಸಿಕೊಟ್ಟಿತೋ ಆ ಯಾವ ದಿನಸು ಅವನಲ್ಲಿತ್ತು? ಅದು ವಾಸ್ತವಿಕವಾಗಿ ಸತತ ಪ್ರಯತ್ನದ ಶಕ್ತಿಯೇ ಸರಿ. ಅಂಥ ಶಕ್ತಿಯು ಸರ್ವಶಕ್ತಿಗಳಿಗಿಂತ ಅಧಿಕ ಬಲಿಷ್ಠವಾಗಿರುತ್ತದೆ.

ಸತತ ಪ್ರಯತ್ನದ ದಾರಿಯನ್ನು ಕಟ್ಟುಮಾಡುವ ವಸ್ತುವು ಈ ಜಗತ್ತಿನಲ್ಲಿ ಯಾವುದೂ ಇಲ್ಲ. ದೊಡ್ಡದಕ್ಕಿಂತ ದೊಡ್ಡದಾದ ಕೆಲಸವು ಸಹ ಅವಿಶ್ರಾಂತವಾದ ಸಣ್ಣ ಸಣ್ಣ ಪ್ರಯತ್ನಗಳ ಪರಿಣಾಮವೇ ಆಗಿರುತ್ತದೆ.

ಎಂಥ ದೊಡ್ಡ ದೊಡ್ಡ ಬಂಡೆಗಲ್ಲು ಇರುತ್ತವೆಯಾದರೂ ಅವು ಮಳೆಯ ಹನಿಗಳ ಪೆಟ್ಟು ಒಂದೇ ಸ್ಥಳದಲ್ಲಿ ಬೀಳುವುದರಿಂದ ಇಡಿಯು-ದಿಡಿಯೇ ಸವೆದುಹೋಗುತ್ತವೆ.

ಮಳಲಿನ ಒಂದು ಕಣ ತನ್ನಷ್ಟಕ್ಕೆ ತಾನಾವ ಶಕ್ತಿಶಾಲಿಯಾದ ವಸ್ತುವೂ ಅಲ್ಲ. ಆದರೆ ಅದೇ ಮಳಲಿನ ಕಣಗಳು ಒಟ್ಟುಗೂಡಿದಾಗ

ಒಂದು ದಿನ್ನೆಯಾಗಿ ಬಿಡುತ್ತವೆಯಲ್ಲದೆ ಅವು ಹೀಗೆ ಸಮುದ್ರದ ತೆರೆಗಳನ್ನು ಸಹ ತಡೆಮಾಡುತ್ತವೆ.

ನೀವು ಪ್ರಾಕೃತಿಕ ಇತಿಹಾಸವನ್ನು ಓದಿದಾಗ ನಿಮಗೆ ತೋರಿಸಲಾಗುವದೇನಂದರೆ — ಯಾವ ಪ್ರಕಾರ ಅತಿ ಕ್ಷುದ್ರ ಜೀವಿಗಳು ಒಂದರ ಮೇಲೊಂದು ಹೊಂದಿಕೊಂಡು ಸಮುದ್ರದಲ್ಲಿ (ಹವಳದ) ಗುಡ್ಡಗಳನ್ನು ನಿರ್ಮಿಸುತ್ತವೆ; ಹಾಗೂ ಅವುಗಳ ನಿರಂತರವಾದ ಪ್ರಯತ್ನಗಳಿಂದ ನೀರ ಮೇಲೆ ಸುಂದರಾತಿಸುಂದರವಾದ ದ್ವೀಪಗಳೂ ದ್ವೀಪಸಮೂಹಗಳೂ ಹೊರಬೀಳುತ್ತವೆ.

ನೀವು ಯೋಚಿಸುತ್ತಿರುವುದಾದರೂ ಏನು? ನಿಮ್ಮ ಚಿಕ್ಕಪುಟ್ಟ ನಿರಂತರ ಪ್ರಯತ್ನಗಳು ಮಹಾನ್ ಕಾರ್ಯಗಳನ್ನು ಸಾಧಿಸಿಕೊಡಲಿಕ್ಕೆ ಶಕ್ಯವಿಲ್ಲವೇ?

ಪ್ರಸಿದ್ಧ ದಾರ್ಶನಿಕರಾದ ಶಂಕರಾಚಾರ್ಯರಿಂದ ಮಲಬಾರ ದೇಶದ ಮುಖವು ಉಜ್ವಲವಾಗಿ ಉಳಿದಿದೆ. ಅವರು ಇಂದಿಗೆ ಹನ್ನೆರಡುನೂರು ವರುಷಗಳ ಮೊದಲಿಗೆ ಆಗಿಹೋದರು. ಅವರು ಬಾಲ್ಯದಲ್ಲಿಯೇ ಸನ್ಯಾಸಿಯಾಗುವ ನಿಶ್ಚಯಮಾಡಿಕೊಂಡಿದ್ದರು.

ಅವರ ಇಚ್ಛೆಯ ಮಹತ್ವವನ್ನು ಸ್ವೀಕರಿಸಿದರೂ ಅವರ ತಾಯಿಯು ಬಹುಕಾಲದವರೆಗೆ ಅವರಿಗೆ ಆ ಪ್ರಕಾರದ ಜೀವನವನ್ನು ಗ್ರಹಣ ಮಾಡಲು ಅಪ್ಪಣೆ ಕೊಡಲಿಲ್ಲ.

ಒಂದು ದಿನ ತಾಯಿ ಹಾಗೂ ಮಗ ಇಬ್ಬರೂ ನದಿಯಲ್ಲಿ ಸ್ನಾನಮಾಡಬೇಕೆಂದು ಹೋದರು. ನದಿಯಲ್ಲಿ ಪ್ರವೇಶಿಸುತ್ತಲೇ ಶಂಕರಾಚಾರ್ಯರಿಗೆ ತಮ್ಮ ಕಾಲನ್ನು ಒಂದು ಮೊಸಳೆಯು ಹಿಡಿದುಕೊಂಡಿದೆಯೆಂದು ಒಮ್ಮೆಲೇ ತಿಳಿಯಿತು. ಮರಣವು ಸಮೀಪಿಸಿತೆಂದು ಅನಿಸಿತು. ಆದರೆ ಆ ಕಠಿಣ

ಸಮಯದಲ್ಲಿಯೂ ಆ ವೀರ ಬಾಲಕನಲ್ಲಿ ಅದೇ ಮಹಾನ್ ಆಕಾಂಕ್ಷೆಯು ಪ್ರಬಲವಾಗಿತ್ತು. ಅವನು ಕೂಗಾಡಿ ತನ್ನ ತಾಯಿಗೆ ಹೇಳಿದ್ದೇನೆಂದರೆ— "ನಾನಂತೂ ಹೊರಟೆ. ಒಂದು ಮೊಸಳೆ ನನ್ನನ್ನು ಹಿಡಿದುಕೊಂಡಿದೆ. ಏನಿಲ್ಲೆಂದರೂ ನನ್ನನ್ನು ಸನ್ಯಾಸಿಯಾಗಿಯಾದರೂ ಸಾಯಗೊಡು."

ತಾಯಿ ನಿರಾಶಳಾಗಿ ಅಳುತ್ತಳುತ್ತ ನುಡಿದಳು. — "ಒಳ್ಳೇದು, ಒಳ್ಳೇದು. ನನ್ನ ಮಗನೇ."

ಶಂಕರಾಚಾರ್ಯರ ಸೌಭಾಗ್ಯ! ಆ ಸಮಯಕ್ಕೆ ಅವರಲ್ಲಿ ಅದೆಂಥ ಬಲವು ಬಂದುಬಿಟ್ಟಿತೆಂದರೆ ಕಾಲನ್ನು ಬಿಡಿಸಿಕೊಂಡು ಅವರು ತಮ್ಮ ತಾವೇ ತೀರದವರೆಗೆ ನುಗ್ಗಿ ಬರುವುದಕ್ಕೆ ಸಮರ್ಥರಾಗಿಬಿಟ್ಟರು.

ಆ ಬಳಿಕ ಅವರ ಆಯುಷ್ಯದೊಡನೆಯೇ ಅವರ ಜ್ಞಾನವೂ ಬೆಳೆಯುತ್ತ ಬಂದಿತು. ಅವರು ಒಬ್ಬ ಗುರುವಾದರು. ತಮ್ಮ ಅದ್ಭುತ ಜೀವನದ ಅಂತಿಮ ಗಳಿಗೆಯವರೆಗೆ ಅವರು ಜ್ಞಾನೋಪದೇಶದ ಹಿರಿಯ ಕಾರ್ಯದಲ್ಲಿ ತೊಡಗಿಕೊಂಡರು.

ಭಾರತವನ್ನು ಪ್ರೇಮಿಸುವ ಸರ್ವಜನರು ಮಹಾಭಾರತದ ಸುಂದರ ಕಾವ್ಯದಿಂದ ಪರಿಚಿತರಾಗಿಯೇ ಬಿಡುವರು. ಎಷ್ಟೋ ಶತಾಬ್ದಿಗಳ ಮೊದಲು ಅದು ಸಂಸ್ಕೃತದಲ್ಲಿ ಬರೆಯಲ್ಪಟ್ಟಿತು. ಕೆಲವು ವರುಷಗಳ ಹಿಂದಿನವರೆಗೆ ಸಂಸ್ಕೃತವರಿಯದ ಯಾವ ಇರೋಪಿಯನನೂ ಅದನ್ನು ಓದಲಾರನು. ಹಾಗೂ ಸಂಸ್ಕೃತ ಬಲ್ಲ ಇರೋಪಿಯನರೂ ಕಡಿಮೆಯೇ ಇದ್ದರು. ಆದಕಾರಣ ಇರೋಪದ ಭಾಷೆಗಳಲ್ಲಿಯ ಯಾವುದಾದರೊಂದರಲ್ಲಿ ಅದರ ಅನುವಾದವಾಗುವುದು ಅವಶ್ಯಕವಾಗಿಬಿಟ್ಟಿತು.

ಬಾಬು ಪ್ರತಾಪಚಂದ್ರರಾಯರು ತಮ್ಮಿಂದ ತಾವೇ ಈ ಕೆಲಸದಲ್ಲಿ ತೊಡಗಿಕೊಳ್ಳುವ ನಿಶ್ಚಯಮಾಡಿದರು. ತಮ್ಮ ದೇಶದಲ್ಲಿಯೇ ಅವರಿಗೆ

ಅದೆಂಥ ವಿದ್ವಾಂಸ ಮಿತ್ರರು ದೊರಕೊಂಡರೆಂದರೆ—ಅವರು ಸಂಸ್ಕೃತದ ಆ ಪುಸ್ತಕವನ್ನು ಇಂಗ್ಲಿಷಿನಲ್ಲಿ ಅನುವಾದಿಸಲು ಶಕ್ತರಾಗಿದ್ದರು. ಅವರ ಹೆಸರು ಕಿಶೋರೀ ಮೋಹನ ಗಾಂಗುಲಿ. ಈ ಪುಸ್ತಕವು ನೂರು ಖಂಡಗಳಲ್ಲಿ ಕ್ರಮವಾಗಿ ಪ್ರಕಾಶಿತವಾಯಿತು.

ಹನ್ನೆರಡು ವರುಷಗಳವರೆಗೆ ಪ್ರತಾಪಚಂದ್ರರಾಯರು ಆ ಕೆಲಸದಲ್ಲಿ ತೊಡಗಿಕೊಂಡರು. ಅವರು ತಮ್ಮ ಸರ್ವ ಆಸ್ತಿಯನ್ನು ಆ ಪುಸ್ತಕದ ಪ್ರಕಾಶನದಲ್ಲಿ ತೊಡಗಿಸಿದರು. ಹಾಗೂ ಯಾವಾಗ ತಮ್ಮ ಹತ್ತಿರ ಏನೂ ಇಲ್ಲದಂತಾಯಿತೋ ಆವಾಗ ದೇಶದ ಬೇರೆಬೇರೆ ಭಾಗಗಳಲ್ಲಿ ತಿರುಗಾಡಿದರು. ಹಾಗೂ ಯಾರಾದರೂ ಅಲ್ಪ ಕೊಡುಗೆ ಕೊಡುವ ಅಭಿರುಚಿಯಿಟ್ಟು ಕೊಂಡಿದ್ದರೋ ಆ ಎಲ್ಲರಿಂದಲೂ ಅವರು ಸಹಾಯ ಬೇಡಿದರು. ಆ ಸಹಾಯ ಸಲ್ಲಿಸುವವರಲ್ಲಿ ರಾಜರೂ ಇದ್ದರು. ಒಕ್ಕಲಿಗರೂ ಇದ್ದರು. ವಿದ್ವಾಂಸರಂತೆ ಅಶಿಕ್ಷಿತರೂ ಇದ್ದರು. ಇರೋಪ ಹಾಗೂ ಅಮೇರಿಕೆಯ ಮಿತ್ರರೂ ಇರದಿರಲಿಲ್ಲ.

ಆ ಪ್ರಯಾಣದಲ್ಲಿದ್ದಾಗ ಒಂದು ಕಡೆ ಅವರಿಗೆ ಅದೆಂಥ ಘಾತುಕ ಜ್ವರ ಬಂದು ಮನೆಗೆ ದಬ್ಬಿತೆಂದರೆ - ಅದೇ ಅವರ ಮೃತ್ಯುವಿಗೆ ಕಾರಣವಾಗಿ ಬಿಟ್ಟಿತು. ರೋಗದ ಅವಸ್ಥೆಯಲ್ಲಿಯೂ ಅವರ ಸರ್ವ ವಿಚಾರಗಳೂ ಆ ಕಾರ್ಯವನ್ನು ಪೂರ್ತಿಗೊಳಿಸುವುದರ ಮೇಲೆಯೇ ಕೇಂದ್ರಿತವಾಗಿದ್ದವು. ಅಂಥ ಸಮಯದಲ್ಲಿಯೂ ಸಂಕಟದಿಂದ ಅವರು ಹೆಚ್ಚು ಮಾತುಕತೆಯಾಡಲು ಶಕ್ಯವಿಲ್ಲದಾಗ ಅವರು ತಮ್ಮ ಹೆಂಡತಿಗೆ ಹೇಳಿದರು. — "ಈ ಪುಸ್ತಕವು ಪೂರ್ತಿಗೊಳ್ಳಲೇಬೇಕು. ನನ್ನ ಕ್ರಿಯಾಕರ್ಮಗಳಿಗಾಗಿ ಖರ್ಚು ಮಾಡ ಬಾರದು. ಯಾಕೆಂದರೆ ಪುಸ್ತಕ ಪ್ರಕಾಶನದ ಸಲುವಾಗಿ ಹಣದ ಕೊರತೆ ಯುಂಟಾಗುವದು. ನೀನು ಸಹ ಸಾಧ್ಯವಾದಷ್ಟು ಸಾದಾ ಜೀವನವನ್ನು ನಡೆಯಿಸು. ಅದರಿಂದ ಮಹಾಭಾರತಕ್ಕಾಗಿ ದುಡ್ಡು ಉಳಿಯಬಲ್ಲದು."

ಅವರು ಭಾರತ ಹಾಗೂ ಅದರ ಮಹಾಕಾವ್ಯದ ಸಲುವಾಗಿ ಪ್ರೇಮ ದಿಂದ ತುಂಬಿದ ಹೃದಯದೊಡನೆ ತೀರಿಕೊಂಡರು.

ಅವರ ವಿಧವೆಯಾದ ಸುಂದರಿಬಾಲಾ ರಾಯ ಅವರು ಶ್ರದ್ಧಾಪೂರ್ವ ಕವಾಗಿ ಆ ಮಹದಿಚ್ಛೆಯನ್ನು ಪಾಲಿಸಿದರು. ಒಂದು ವರುಷದಲ್ಲಿ ಅನು ವಾದಕ ಮಹೋದಯರು ಕಾರ್ಯವನ್ನು ಪೂರ್ಣಗೊಳಿಸಿಕೊಟ್ಟರು. ಹಾಗೂ ಮಹಾಭಾರತದ ಹನ್ನೊಂದು ಸಂಪುಟಗಳು ಇರೋಪದ ಜನತೆಯ ಸಮ್ಮುಖಕ್ಕೆ ಬಂದುಬಿಟ್ಟವು. ಈಗ ಅವರು ಆ ಅದ್ಭುತ ಮಹಾಕಾವ್ಯದ ಹದಿನೆಂಟು ಪರ್ವಗಳನ್ನು ತಿಳಿಯಬಲ್ಲರು. ಹಾಗೂ ಅದರ ಮಹತ್ವವನ್ನು ಅನುಭವಕ್ಕೆ ತಂದುಕೊಳ್ಳ ಬಲ್ಲರು. ಮಹಾಭಾರತವನ್ನೋದಿ ಅವರು ನಿಶ್ಚಯ ವಾಗಿಯೂ ಭಾರತದ ಗಂಭೀರ ವಿಚಾರಗಳನ್ನೂ ಪ್ರಾಚೀನ ಕವಿಗಳ ಮಹಾನ್ ಪ್ರತಿಭೆ ಹಾಗೂ ಜ್ಞಾನವನ್ನೂ ಮನ್ನಿಸುವದಕ್ಕೆ ಕಲಿಯುವರು.

ಈ ಫಲಗಳೆಲ್ಲ ಅವರೆಲ್ಲರ ಪುರುಷಾರ್ಥದ ಪರಿಣಾಮ. ಆ ಪ್ರತಾಪಚಂದ್ರರಾಯ ಹಾಗೂ ಇನ್ನುಳಿದ ಯೋಗ್ಯ ವ್ಯಕ್ತಿಗಳ ಹಾಗೆ ಯಾವಾಗಲೂ ಪ್ರಯತ್ನಿಸುವುದನ್ನು ಅವು ತಿಳಿಸುತ್ತವೆ.

ವೀರ ಬಾಲಕರೇ, ನೀವು ಅಂಥ ಪುರುಷ ಹಾಗೂ ಸ್ತ್ರೀಯರ ಪಂಕ್ತಿ ಯಲ್ಲಿ ನಿಲ್ಲಲು ಇಚ್ಛಿಸುವದಿಲ್ಲವೇ? ಅವರು ಒಳ್ಳೆಯ ಕೆಲಸಗಳಿಂದ ಎಂದೂ ದಣಿಯುವದಿಲ್ಲ. ಮತ್ತು ಕೆಲಸವನ್ನು ಪೂರ್ಣಗೊಳಿಸದೆ ಅವರು ಎಂದೂ ಅರ್ಧಕ್ಕೆ ಬಿಡುವದಿಲ್ಲ.

ಈ ವಿಸ್ತಾರವಾದ ಜಗತ್ತಿನಲ್ಲಿ ಮಾಡತಕ್ಕ ಒಳ್ಳೆಯ ಕಾರ್ಯಗಳಿಗೆ ಅಭಾವವಿಲ್ಲ. ಅವರು ಅವುಗಳನ್ನು ಕೈಯಲ್ಲಿ ತಕ್ಕೊಳ್ಳಬಲ್ಲರು. ಆದರೆ ಅದೇತರ ಅಭಾವವು ಪ್ರಾಯಶಃ ಉಂಟಾಗುವದೆಂದರೆ—ಸತತ ಪ್ರಯತ್ನ. ಅದು ಒಂದೇ ಕಾರ್ಯಸಿದ್ಧಿಯವರೆಗೆ ತೆಗೆದುಕೊಂಡುಹೋಗಬಲ್ಲದು.

೬

# ಸಾದಾ ಜೀವನ

ಮಹಮ್ಮದ ಪೈಗಂಬರರು ತಮ್ಮ ಸಮಸ್ತ ಜೀವನವನ್ನೇ ಅರಬೀ ಜನರ ಶಿಕ್ಷಣ ಹಾಗೂ ಅಭ್ಯುದಯಗಳಲ್ಲಿ ತೊಡಗಿಸಿದ್ದರು. ಅವರು ಧನಿಕರೂ ಅಲ್ಲ. ಅವರಲ್ಲಿ ಸುಖಸಮೃದ್ಧಿಗಳ ಯಾವ ಸಾಧನವೂ ಇರಲಿಲ್ಲ. ಒಂದು ರಾತ್ರಿ ಅವರು ಒಂದು ಬಿರುಸಾದ ಚಾಪೆಯ ಮೇಲೆ ಮಲಗಿಕೊಂಡಿದ್ದರು. ಅವರ ದೇಹದ ಮೇಲೆ ಚಾಪೆಯ ಹಗ್ಗ ಹಾಗೂ ಗಂಟು ಇವುಗಳ ಗುರುತು ಮೂಡಿಬಿಟ್ಟಿತು. ಒಬ್ಬ ಮಿತ್ರನಿಗೆ ಸುಮ್ಮನಿರುವದಕ್ಕೆ ಆಗಲಿಲ್ಲ. ನುಡಿದನು— “ ಓ ! ಈಶ್ವರದೂತರೇ ! ಈ ಹಾಸಿಗೆ ನಿಮಗೆ ಅತ್ಯಂತ ಬಿರುಸಾಗಿದೆ. ನನಗೆ ತಾವು ಅಪ್ಪಣೆ ಕೊಟ್ಟರಾದರೆ ನಾನು ನಿಮ್ಮ ಸಲುವಾಗಿ ಬಹು ಸಂತೋಷಪೂರ್ವಕವಾಗಿ ಒಂದು ಮೆತ್ತಗಿನ ಹಾಸಿಗೆಯನ್ನು ಅಣಿಗೊಳಿಸಿ ಕೊಡುವೆನು. ಅದರಿಂದ ತಮಗೆ ವಿಶ್ರಾಂತಿಯು ಹೆಚ್ಚು ಸುಖಕರವಾಗಿ ಬಿಡುತ್ತದೆ. ”

ಪೈಗಂಬರರು ಮರುನುಡಿದದ್ದೇನಂದರೆ— “ ಬಂಧುವೇ ! ಮೆತ್ತಗಿನ ಹಾಸಿಗೆಯು ನನ್ನ ಸಲುವಾಗಿ ಅಲ್ಲ. ಈ ಜಗತ್ತಿನಲ್ಲಿ ನಾನು ಒಂದಿಷ್ಟು ಕೆಲಸ ಮಾಡುವುದಿರುತ್ತದೆ. ಯಾವಾಗ ನನ್ನ ಶರೀರಕ್ಕೆ ವಿಶ್ರಾಂತಿಯ ಆವಶ್ಯಕತೆಯುಂಟಾಗುವದೋ ಆವಾಗ ನಾನದನ್ನು ಅದಕ್ಕೆ ಕೊಟ್ಟುಬಿಡುತ್ತೇನೆ.

ಆದರೆ ಆ ಕುದುರೆ ಸ್ವಾರರು ತಮ್ಮ ಕುದುರೆಯನ್ನು ಬಿಸಿಲಿನ ತೀವ್ರತೆಯಿಂದ ಉಳಿಸುವ ಸಲುವಾಗಿ ಕ್ಷಣಹೊತ್ತು ಯಾವುದಾದರೂ ಗಿಡದ ನೆರಳಿನಲ್ಲಿ ಕಟ್ಟಿಹಾಕುತ್ತಾರೆ. ಬಳಿಕ ಮತ್ತೆ ಮುಂದಕ್ಕೆ ಸಾಗಿಸುತ್ತಾರೆ. ”

ಜಗತ್ತಿನಲ್ಲಿ ಏನಾದರೂ ಕಾರ್ಯ ಮಾಡುವುದಿದೆಯೆಂದು ಪೈಗಂಬರರ ಹೇಳಿಕೆಯಿತ್ತು. ಆದಕ್ಕಾಗಿಯೆ ಅವರ ಉಚ್ಚ ಜೀವನವು ಒಂದು ಸಾದಾ ಜೀವನವಾಗಿ ಬಿಟ್ಟಿತ್ತು. ತಮ್ಮ ಧ್ಯೇಯದಲ್ಲಿ ವಿಶ್ವಾಸವಿಡುತ್ತ ಅವರು ಸರ್ವ ಅರಬೀ ಜನರಿಗೆ ಶಿಕ್ಷಣ ಕೊಡಬೇಕೆನ್ನುತ್ತಿದ್ದರು. ಆಟನೋಟಗಳ ಸಾಧನಗಳಲ್ಲಿ ಅವರಿಗೆ ಎಷ್ಟೂ ಆಸಕ್ತಿಯಿರಲಿಲ್ಲ. ಅವರ ಹೃದಯವು ಉಚ್ಚ ವಿಚಾರಗಳ ಕಡೆಗೆ ಹರಿಯುತ್ತಿತ್ತು.

ಕೆಳಗೆ ಬರೆದ ಅರಬೀ ಕಥೆಯಿಂದ ನಮಗೆ ಕಂಡುಬರುವುದೇನಂದರೆ— ಒಂದು ಸ್ವಸ್ಥ ಆತ್ಮವನ್ನು ಸಾದಾ ಜೀವನವು ಸಂತೋಷಪಡಿಸುವಷ್ಟು ಇನ್ನಾವ ವಸ್ತುವೂ ಸಂತೋಷಪಡಿಸಲಾರದು.

ಮೈಜೂ ಎಂಬವಳು ಖಲ್ಬವಂಶದ ಬಾಲಿಕೆಯಾಗಿದ್ದಳು. ಅವಳು ತನ್ನ ಜೀವನದ ಪ್ರಾರಂಭಿಕ ವರ್ಷಗಳನ್ನು ಮರುಭೂಮಿಯ ನಡುವೆ ಗುಡಾರದಲ್ಲಿ ಕಳೆದಿದ್ದಳು.

ಯೋಗಾಯೋಗ ವಶದಿಂದ ಅವಳ ಮದುವೆಯು ಖಲೀಫಾ ಮುಆವಿಯಾನ ಸಂಗಡ ಆಗಿಬಿಟ್ಟಿತು. ಖಲೀಫನ ಬಳಿಯಲ್ಲಿ ಬಹಳಷ್ಟು ದ್ರವ್ಯವಿತ್ತು. ಆಳುತೊತ್ತುಗಳೂ ಹೆಚ್ಚು ಸಂಖ್ಯೆಯಲ್ಲಿದ್ದರು. ಆದರೆ ಅವಳು ಅವನೊಡನಿದ್ದು ಸಂತುಷ್ಟಳಾಗಿರಲಿಲ್ಲ.

ನಾಲ್ಕೂ ನಿಟ್ಟಿಗೂ ತುಂಬ ದ್ರವ್ಯಸಂಪತ್ತಿದ್ದರೂ ಅವಳ ಮನಸ್ಸಿಗೆ ವಿಶ್ರಾಂತಿ ಇರಲಿಲ್ಲ. ಎಂದಾದರೂ ಅವಳು ಒಂಟಿಗಳಾಗಿದ್ದಾಗ ಅರಬೀ

ಭಾಷೆಯ ಕೆಲವು ಸ್ವರಚಿತ ಪದಗಳನ್ನು ಮಧುರ ಸ್ವರದಲ್ಲಿ ಹಾಡತೊಡಗು ವಳು. ಅವಳು ಹಾಡುವಳು—

"ಒಂಟೆಯ ತೊಗಲಿನಿಂದ ಮಾಡಿದ ಬೂದು ಬಣ್ಣದ ವಸ್ತ್ರಗಳು ನನ್ನ ಕಣ್ಣುಗಳಲ್ಲಿ ಈ ರಾಜಸೀ ವಸ್ತ್ರಗಳಿಗಿಂತ ಎಷ್ಟೋ ಸುಂದರವಾಗಿವೆ.

ಇರುವ ಸಲುವಾಗಿ ಮರುಭೂಮಿಯ ಗುಡಾರವು ಈ ಮಂದಿರದ ವಿಶಾಲವಾದ ಕೋಣೆಗಿಂತ ಹೆಚ್ಚು ಸುಖಕರವಾಗಿದೆ.

ಕೋಳಿಯ ಪಿಳ್ಳೆಗಳು ಆರಬರಲ್ಲಿ ಗುಡಾರದ ಸುತ್ತಲು ನಲಿದಾಡು ತ್ತವೆ. ಅವು ಪುಷ್ಟವೂ ಬಹು ಮೂಲ್ಯವೂ ಆದ ಅಲಂಕಾರಗಳಿಂದ ಸಜ್ಜುಗೊಂಡ ಹೇಸರಗತ್ತೆಗಳಿಗಿಂತ ಕಾಂತಿಪೂರ್ಣ ಹಾಗೂ ಸುಂದರ ವಾಗಿವೆ.

ಯಾವ ಹೊಸಬನನ್ನಾದರೂ ನೋಡಿ ಬೊಗಳುತ್ತಿರುವ ಎಚ್ಚರಿಕೆಯ ವೇಲಿರುವ ನಾಯಿಯ ಉಲಿವು ಮಂದಿರದ ಕಾವಲುಗಾರನ ಹಸ್ತಿದಂತದಿಂದ ಮಾಡಿದ ತುತ್ತೂರಿಯ ಧ್ವನಿಗಿಂತ ಸುಸ್ವರವುಳ್ಳದ್ದಾಗಿದೆ."

ಈ ಸಾಲುಗಳು ಖಲೀಫನ ಕಿವಿಗೆ ಬೀಳಲು ಅವನು ಸಿಟ್ಟಿಗೇರಿ ತನ್ನ ಹೆಂಡತಿಯನ್ನು ಆರಮನೆಯಿಂದ ಹೊರದೂಡಿದನು. ಆ ಕವಿಯಿತ್ರಿಯು ತನ್ನ ಸಂಬಂಧಿಗಳೊಡನೆ ಮರಳಿ ಬಂದಳು. ಆ ಐಶ್ವರ್ಯಯುಕ್ತ ಮಂದಿರ ದಿಂದ ದೂರಬಂದು ಅವಳು ಸಂತುಷ್ಟಳೇ ಆದಳು. ಯಾಕಂದರೆ ಅದು ಅವಳನ್ನು ಯಾವಾಗಲೂ ನಿರುತ್ಸಾಹಿಯನ್ನಾಗಿ ಮಾಡಿಬಿಡುತ್ತಿತ್ತು.

ಪ್ರಾಯಶಃ ಸರ್ವ ದೇಶಗಳಲ್ಲಿ ಈಗ ಜನರು ಏನು ತಿಳಿಯತೊಡಗಿ ದ್ದಾರೆಂದರೆ-- ಸಾದಾ ಜೀವನವು ವ್ಯರ್ಥ ಖರ್ಚು, ಡಂಭ, ಮಿಥ್ಯಾಭಿಮಾನ

ಇಷ್ಟಗಳನ್ನು ಅವಲಂಬಿಸಿದ ಜೀವಧಕ್ಕಿಂತ ಅದೆಷ್ಟೋ ಹೆಚ್ಚಿಗೆ ವಾಂಛನೀಯವಾಗಿದೆ.

ಅಧಿಕಾಧಿಕ ಸಂಖ್ಯೆಯಲ್ಲಿ ಈಗ ಪುರುಷರೂ ಸ್ತ್ರೀಯರೂ ಬಹು ಬೆಲೆಯ ವಸ್ತುಗಳನ್ನು ಕೊಂಡುಕೊಳ್ಳಬಲ್ಲ ಆಸಕ್ತಿಯನ್ನಿಟ್ಟುಕೊಂಡಿದ್ದರೂ ತಮ್ಮ ಧನದ ಸದುಪಯೋಗ ಹೇಗಾಗಬಲ್ಲದೆಂಬುದನ್ನು ವಿಚಾರಿಸತೊಡಗಿದ್ದಾರೆ. ಅವರು ಸುಗ್ರಾಸ ಭೋಜನದ ಚಿಕ್ಕ ತಟ್ಟೆಗಳ ಬದಲು ಸ್ವಾಸ್ಥ್ಯಪ್ರದವಾದ ಭೋಜನದ ವ್ಯವಹಾರವನ್ನು ಒಪ್ಪಿಕೊಳ್ಳಹತ್ತಿದ್ದಾರೆ. ದೊಡ್ಡ ದೊಡ್ಡ ಬೆಲೆಯುಳ್ಳ ಥಳಕುಬೆಳಕಿನ ಸಾಮಾನುಗಳ ಬದಲು ಅವರು ತಮ್ಮ ಮನೆಗಳನ್ನು ಅಗ್ಗವಾದ ತಾಳಿಕೆಯ ಸಾಮಾನುಗಳಿಂದ ಸಜ್ಜುಗೊಳಿಸುವುದು ಹೆಚ್ಚು ಒಳ್ಳೆಯದೆಂದು ತಿಳಿಯತೊಡಗಿದ್ದಾರೆ ಯಾಕಂದರೆ ಅದು ಮೇಲಿನ ಅಂದಚಂದಕ್ಕೆ ನೋಟಕ್ಕೆ ಅಲ್ಲದೆ ಇನ್ನಾವ ಕೆಲಸಕ್ಕೂ ಬಾರದು.

ಜಗತ್ತಿನ ಉನ್ನತಿಯಲ್ಲಿ ನಮ್ಮ ಜೀವನವನ್ನು ತ್ಯಾಗಮಾಡುವ ಶ್ರೇಷ್ಠನೂ ಉತ್ಸಾಹಿಯೂ ಆದ ಮನುಷ್ಯನು ಯಾವಾಗಲೂ ಶಾಂತಿ ಹಾಗೂ ನಿಶ್ಚಯಗಳಿಂದ ಇರುವುದನ್ನು ಬಲ್ಲನು. ಅಂಥ ಜೀವನವು ಶರೀರವನ್ನು ಸಹ ಸ್ವಸ್ಥವಾಗಿರಿಸುತ್ತದೆ. ಹಾಗೂ ಮನುಷ್ಯನನ್ನು ಸರ್ವ ಹಿತದ ಕಾರ್ಯಗಳಲ್ಲಿ ಹೆಚ್ಚು ಹೆಚ್ಚು ಭಾಗ ತೆಗೆದುಕೊಳ್ಳಲು ಯೋಗ್ಯನನ್ನಾಗಿ ಮಾಡುತ್ತದೆ. ಇಂಥ ಉದಾಹರಣೆಗಳಿಂದ ಜನರ ತಲೆಯು ಲಜ್ಜೆಯಿಂದ ಬಾಗಿಬಿಡುವದು. ಅವರು ತಮ್ಮ ಸುತ್ತುಮುತ್ತಲು ನಿರರ್ಥಕ ವಸ್ತುಗಳನ್ನು ನೆರೆಯಿಸಿಕೊಂಡಿರುವರು. ಹಾಗೂ ಅವರ ಸ್ವಂತದ ಉಡುತೊಡಿಗೆ ಮನೆ ಇವುಗಳ ಸಜ್ಜುವಣಿಯು ಆಳುಹೋಳುಗಳಿಲ್ಲದೆ ತೊತ್ತುಗಳಿಲ್ಲದೆ ಇನ್ನೆಷ್ಟೂ ಆಗಲಾರದು.

ಆಗಿದು ಕೆತ್ತಿ ತಿದ್ದದಿದ್ದರೆ ಯಾವ ದಿನ್ನೆಯೂ ಸಮವಾಗಲಾರದು. ಒಬ್ಬರ ಧನ ಐಶ್ವರ್ಯವು ಪ್ರಾಯಶಃ ಇನ್ನೊಬ್ಬರ ದುರ್ದಶೆಗೆ ಕಾರಣವಾಗುತ್ತ ಇದೆ. ಈ ಜಗತ್ತಿನಲ್ಲಿ ಸುಂದರವೂ ಶ್ರೇಷ್ಠವೂ ಉಪಯುಕ್ತವೂ

ಆದ ಬಹಳಷ್ಟು ಕೆಲಸವು ಮಾಡುವುದಕ್ಕಾಗಿ ಬಿದ್ದುಕೊಂಡಿದೆ. ಯಾರಲ್ಲಿ ಬುದ್ಧಿಯ ಅಭಾವವು ಎಷ್ಟು ಇಲ್ಲವೋ ಅಂಥ ಜನರು ತಮ್ಮ ಸಮಯವನ್ನೂ ಹಣ ಹಾಗೂ ವಿಚಾರಗಳನ್ನೂ ನಿರುಪಯುಕ್ತ ಕಾರ್ಯದಲ್ಲಿ ಖರ್ಚುಗೊಳಿಸಿ ಬಿಡುವ ಸಂಭವವೆಲ್ಲಿ ?

ಸಾಧು ಫರಾಸ್ವಾ ಅವರ ಮುಖ್ಯ ಕಾರ್ಯವೆಂದರೆ ಸತ್ಯ ಜೀವನದ ಪ್ರಚಾರ. ಆ ಕೆಲಸವನ್ನು ಅವರು ಧನದ ಲಾಲಸೆಯಿಂದ ಮಾಡುತ್ತಿದ್ದಿಲ್ಲ. ಅವರ ಸ್ವಂತದ ಜೀವನವು ಸರಳವಾಗಿತ್ತು. ಹಾಗೂ ತಮ್ಮ ಉದಾಹರಣ ಹಾಗೂ ಉಪದೇಶಗಳಿಂದ ಜನರಿಗೆ ಶಿಕ್ಷಣ ಕೊಡುವುದರಲ್ಲಿ ಅವರಿಗೆ ಎಲ್ಲಕ್ಕಿಂತ ಹೆಚ್ಚು ಸಂತುಷ್ಟಿಯಿತ್ತು. ಅವರಿಗೆ ತಿನ್ನಲಿಕ್ಕೆ ಏನು ಸಿಕ್ಕರೂ ಅದರಲ್ಲಿ ಸಂತುಷ್ಟರಾಗಿಬಿಡುತ್ತಿದ್ದರು.

*　　　*　　　*　　　*

ಒಂದು ದಿನ ಅವರು ಹಾಗೂ ಅವರ ಸಂಗಡಿಗ ಮಾತೇವೋ ಇಬ್ಬರೂ ಒಂದು ನಗರದ ಹತ್ತಿರದಿಂದ ಸಾಗಿದರು. ಮಾತೇವೊ ಭಿಕ್ಷೆಯ ಸಲುವಾಗಿ ಒಂದು ಬೀದಿಯನ್ನೂ ಫರಾಸ್ವಾ ಇನ್ನೊಂದು ಬೀದಿಯನ್ನೂ ಹಿಡಿದು ನಡೆದರು. ಫರಾಸ್ವಾ ಕಿರಿಯ ಗಾತ್ರದವರಾಗಿ ನೋಡುವುದಕ್ಕೆ ಅಷ್ಟಕ್ಕಷ್ಟೇ ಇದ್ದರು. ಅವರ ಸಂಗಡಿಗನು ಎತ್ತರವಾದ ನಿಲುಕಟ್ಟಿನವನಾಗಿದ್ದು ಪ್ರಭಾವಶಾಲಿಯೂ ಸುಂದರನೂ ಆಗಿದ್ದನು. ಜನರು ಆತನಿಗೆ ಭಿಕ್ಷೆಯನ್ನು ತುಂಬ ಹಾಕಿದರು. ಆದರೆ ಬಡಪಾಯಿಯಾದ ಫರಾಸ್ವಾನಿಗೆ ಸ್ವಲ್ಪವೇ ಅನ್ನದ ಹೊರತು ಇನ್ನೇನೂ ಸಂಗ್ರಹಿಸಲಿಕ್ಕೆ ಆಗಲಿಲ್ಲ.

ಸಂಜೆಗೆ ನಗರದ ಅಗಸೆಯ ಹೊರಗೆ ಇಬ್ಬರೂ ಕೂಡಿದರು. ಹತ್ತಿರವೇ ಹರಿಯುವ ಹೊಳೆಯ ದಂಡೆಯಲ್ಲಿದ್ದ ಒಂದು ದೊಡ್ಡ ಬಂಡೆಗಲ್ಲಿನ ಮೇಲೆ ಕುಳಿತುಕೊಂಡು ಅವರು ತಮ್ಮ ಇಡಿಯ ದಿವಸದ ಹುಟ್ಟುವಳಿಯ ಮೇಲೆ ದೃಷ್ಟಿ ಹಾಕಿದರು. ಫರಾಸ್ವಾ ಪ್ರಫುಲ್ಲಿತ ಮುಖದಿಂದ ಮಾತೆತ್ತಿದನು—

“ಬಂಧು ಮಾತಾಪ್ರೋ, ನಮಗೆ ಇಂಥ ಮಹಾ ಭೋಜನದ ಭರವಸೆಯಿರಲಿಲ್ಲ.” ಅದಕ್ಕೆ ಮಾತಾಪ್ರೋ ಮರುನುಡಿದದ್ದೇನಂದರೆ—“ರೊಟ್ಟಿಯ ಇಷ್ಟು ಸ್ವಲ್ಪ ತುಣುಕುಗಳಲ್ಲಿ ನಿಮಗೆ ಮಹಾ ಭೋಜನವು ಕಾಣಿಸಿಕೊಳ್ಳುತ್ತಿದೆಯೇ? ನಮ್ಮಲ್ಲಿ ಯಾವ ಮೇಜೂ ಇಲ್ಲ; ಚೂರಿ ಇಲ್ಲ; ಮುಳ್ಳು ಚಮಚೆ ಇಲ್ಲ. ಯಾವ ನೌಕರನೂ ಇಲ್ಲ.”

“ಹಸಿವೆಯಾದ ಮೇಲೆ ಸುಂದರವಾದ ಬಂಡೆಗಲ್ಲೇ ಮೇಜು. ಈ ಮೇಜಿನ ಮೇಲೆ ಇಟ್ಟ ರೊಟ್ಟಿ ಅವೆ. ನೀರಡಿಕೆಯಾದಾಗ ಕುಡಿಯಲಿಕ್ಕೆ ನದಿಯ ನಿರ್ಮಲ ನೀರು ಅದೆ. ಇದು ಔತಣವಲ್ಲವೇ?” ಎಂದು ಫರಾಸ್ಸಾ ಉತ್ತರ ಕೊಟ್ಟರು.

ಬಡವರು ಯಾವಾಗಲೂ ತಮ್ಮ ದೀನಾವಸ್ಥೆಯಲ್ಲಿಯೇ ಸಂತೋಷವನ್ನು ಭಾವಿಸಿ ಅದರಲ್ಲಿಯೇ ಬಿದ್ದುಕೊಂಡಿರಬೇಕೆಂದು ಇದರರ್ಥವಲ್ಲ. ಆದರೆ ಇದರಿಂದ ಹೊರಪಡುವದೇನಂದರೆ— ಯಾವ ಬಾಹ್ಯ ಧನ ಹಾಗೂ ಸಾಮಗ್ರಿಗಳ ಅಭಾವದಲ್ಲಿ ಸುಂದರವಾದ ಆತ್ಮದೊಳಗಿರುವವನ ಸಂತೋಷ ಹಾಗೂ ಪ್ರಸನ್ನತಾರೂಪೀ ಧನ ಇವು ಆ ಸ್ಥೂಲ ಧನದ ಸ್ಥಳವನ್ನು ತೆಗೆದು ಕೊಳ್ಳುತ್ತವೆ.

*　　　*　　　*　　　*

ಸರಳ ಜೀವನವು ಯಾವ ವ್ಯಕ್ತಿಗೂ ಹಾನಿಯನ್ನುಂಟು ಮಾಡುವದಿಲ್ಲವೆನ್ನುವದರಲ್ಲಿ ಯಾವ ಸಂದೇಹವೂ ಇಲ್ಲ. ಆದರೆ ಧನ ಐಶ್ವರ್ಯದ ಬಾಹುಲ್ಯದ ವಿಷಯದಲ್ಲಿ ಹೀಗೆ ಹೇಳಲಿಕ್ಕಾಗುವದಿಲ್ಲ. ನಿರರ್ಥಕ ವಸ್ತುಗಳ ಸಂಗ್ರಹವು ಪ್ರಾಯಶಃ ಮನುಷ್ಯನ ಮಟ್ಟಿಗೆ ಕ್ಲೇಶಕ್ಕೆ ಕಾರಣವಾಗಿ ಬಿಡುತ್ತದೆ.

ಪ್ರಸಿದ್ಧ ಬಾದಶಹನಾದ ಅಕಬರನ ರಾಜ್ಯಕಾಲದಲ್ಲಿ ಆಗ್ರಾದೊಳಗೆ ಬನಾರಸೀದಾಸ ಎಂಬ ಒಬ್ಬ ಜೈನ ಸಾಧು ಇರುತ್ತಿದ್ದನು. ಒಂದು ದಿನ ಬಾದಶಹನು ಅವನನ್ನು ತನ್ನ ಮಂದಿರಕ್ಕೆ ಕರೆಯಿಸಿ ಅವನಿಗೆ ಹೇಳಿದನು—

"ನಿಮಗೆ ಬೇಕಾದುದನ್ನು ನನಗೆ ಬೇಡಿ ಇಸಗೊಳ್ಳಿರಿ. ನಿಮ್ಮ ಧರ್ಮ ಪೂರ್ಣ ಜೀವನದ ಫಲಸ್ವರೂಪವಾಗಿ ನಿಮ್ಮ ಸರ್ವ ಇಚ್ಛೆಗಳನ್ನು ಪೂರ್ತಿ ಗೊಳಿಸಲಾಗುವದು."

"ಪರಬ್ರಹ್ಮನು ನನಗೆ ಅವಶ್ಯಕತೆಗಿಂತ ಹೆಚ್ಚಿಗೆ ಕೊಟ್ಟಿದ್ದಾನೆ." ಎಂದು ಆ ಸಾಧುವು ಉತ್ತರ ಕೊಟ್ಟನು.

ಅಕಬರನು ಆಗ್ರಹಪಡಿಸಿದನು— "ಏನಾದರೂ ಬೇಡಿರಿ."

"ಹಾಗಾದರೆ ರಾಜರೇ, ನಾನು ಬೇಡುವುದು ಇದನ್ನೇ. ಏನಂದರೆ— ನೀವು ನನ್ನನ್ನು ಇನ್ನೆಂದೂ ನಿಮ್ಮ ಮಂದಿರಕ್ಕೆ ಕರೆಯಿಸಬೇಡಿರಿ. ನನ್ನ ಸರ್ವ ಸಮಯವೂ ಸ್ವಾಮಿಯ ಕಾರ್ಯದ ಸಲುವಾಗಿಯೇ ಇದೆ."

"ಒಳ್ಳೇದು. ಹಾಗೂ ಆಗಲಿ. ಆದರೆ ಮಹಾರಾಜರೇ, ಈಗ ನಿಮ್ಮಲ್ಲಿ ನನ್ನದೂ ಒಂದು ಪ್ರಾರ್ಥನೆ ಇದೆ."

"ಹೇಳಿರಿ ರಾಜರೇ."

"ಯಾವುದನ್ನು ನಾನು ಸದಾ ನೆನಪಿಡಬಲ್ಲೆ; ಹಾಗೊ ಯಾವುದರ ಮೇಲೆ ಪೂರ್ಣ ಅಧಿಕಾರ ನಡೆಸಬಲ್ಲೆ— ಈ ಬಗ್ಗೆ ನನಗೊಂದು ಸಲಹೆ ಕೊಡಿರಿ."

ಬನಾರಸೀದಾಸನು ಒಂದು ಕ್ಷಣ ಯೋಚಿಸಿ ಮರುನುಡಿದನು-"ಯಾವ ಮಾತನ್ನು ಸದಾ ಲಕ್ಷದಲ್ಲಿಡಬೇಕೆಂದರೆ- ನಿಮ್ಮ ಭೋಜನವು ಯಾವಾಗಲೂ ಶುದ್ಧವೂ ಪವಿತ್ರವೂ ಆಗಿರಲಿ. ರಾತ್ರಿಯಲ್ಲಿ ಮಾಂಸ ಹಾಗೂ ಪೇಯ ಪದಾರ್ಥಗಳ ಬಗ್ಗೆ ವಿಶೇಷವಾಗಿ ಲಕ್ಷದಲ್ಲಿಡತಕ್ಕದ್ದು."

"ನಾನು ತಮ್ಮ ಸಲಹೆಯನ್ನು ಎಂದಿಗೂ ಮರೆಯುವದಿಲ್ಲ" ಎಂದು ಬಾದಶಹನು ಸಾಧುವಿಗೆ ಭರವಸೆ ಕೊಟ್ಟನು.

ನಿಜವಾಗಿಯೂ ಆ ಸಲಹೆಗಳು ಉತ್ತಮವಾಗಿವೆ. ಯಾಕೆಂದರೆ ಶುದ್ಧ ಸಾತ್ವಿಕ ಭೋಜನ ಹಾಗೂ ಪೇಯ ಪದಾರ್ಥಗಳು ಶರೀರವನ್ನು ಸ್ವಸ್ಥಗೊಳಿಸುತ್ತವೆ. ಅಂಥ ಶರೀರವೇ ಶುದ್ಧ ವಿಚಾರ ಹಾಗೂ ಪವಿತ್ರ ಜೀವನಗಳ ಕ್ಷೇತ್ರವಾಗಲಿಕ್ಕೆ ಯೋಗ್ಯವಾಗಬಲ್ಲದು.

ಆ ಸಾಧುವು ಅಕಬರನ ಹತ್ತಿರ ಬಂದ ದಿವಸವು ರೋಜಾದ ದಿವಸವಾಗಿತ್ತು. ಅಂದು ರಾತ್ರಿ ಮುಂದಿನ ಪ್ರಹರದಲ್ಲಿ ಅಕಬರನು ಭೋಜನ ಮಾಡುವುದಿತ್ತು. ಅಡಿಗೆಯವನು ಸಂಜೆಗೇ ಅಡಿಗೆಯನ್ನು ಸಿದ್ಧಪಡಿಸಿ ಇಟ್ಟಿದ್ದನು. ಚಿನ್ನ ಬೆಳ್ಳಿಗಳ ತಟ್ಟೆಗಳಲ್ಲಿ ಸರ್ವ ಸಾಮಗ್ರಿಗಳನ್ನು ಬಡಿಸಿ ಅವನು ರೋಜಾ ಮುಗಿಸುವ ಸಮಯವನ್ನು ಪ್ರತೀಕ್ಷಿಸುತ್ತ ಕುಳಿತಿದ್ದನು.

ಇನ್ನು ಕೆಲವೊಂದು ರಾತ್ರಿ ಉಳಿದಿತ್ತು. ಆಗ ಅಕಬರನು ಊಟಕ್ಕೆ ತರಲು ಅಪ್ಪಣೆ ಕೊಟ್ಟನು. ಅವನು ಗಡಿಬಿಡಿಯಲ್ಲಿದ್ದರೂ ಅವನಿಗೆ ಒಮ್ಮೆಲೆ ಬನಾರಸೀದಾಸನ ವಚನವು ನೆನಪಿಗೆ ಬಂದಿತು. – ಮಾಂಸ ಹಾಗೂ ಪೇಯ ಪದಾರ್ಥಗಳ ಬಗ್ಗೆ ವಿಶೇಷ ಲಕ್ಷ್ಯ ಕೊಡು. ಅವನು ತನ್ನ ಮುಂದೆ ಇರಿಸಿದ ತಟ್ಟೆಗಳನ್ನು ಲಕ್ಷ್ಯಪೂರ್ವಕವಾಗಿ ನೋಡಿದನು. ನೂರಾರು ದೊಡ್ಡ ಇರುವೆಗಳು ಅವುಗಳ ಮೇಲೆ ಹಾದು ಹೊರಟಿದ್ದವು. ಆಳುಗಳು ತುಂಬ ಜಾಗರೂಕತೆ ವಹಿಸಿದ್ದರೂ ಇರುವೆಗಳು ಆ ಅಡಿಗೆಯ ಮೇಲೆ ಏರಿ ಹೋಗಿದ್ದವು. ಹಾಗೂ ಅವು ಇನ್ನು ತಿನ್ನುವ ಕೆಲಸ ಉಳಿಸಿದ್ದಿಲ್ಲ.

ಅಕಬರನು ತಟ್ಟೆಗಳನ್ನು ಮರಳಿ ಕಳಿಸಿದನು. ಆದರೆ ಆ ಘಟನೆಯಿಂದ ಅವನ ಮನದಲ್ಲಿ ಬನಾರಸೀದಾಸನ ಸಲಹೆಯ ಮಹತ್ವವು ಇನ್ನೂ ಹೆಚ್ಚಾಗಿ ಬಿಂಬಿಸಿತು.

ಬನಾರಸೀದಾಸನು ಅಕಬರನಿಗೆ ಕೇವಲ ಇರುವೆಗಳ ಸಲುವಾಗಿ ಮಾತ್ರ ಜಾಗರೂಕವಾಗಿರಲು ಹೇಳಿಲ್ಲವೆಂದೂ ಶರೀರ ಹಾಗೂ ಮನಗಳಿಗೆ ಅಹಿತಕರ

ವಾಗಿರುವ ಎಲ್ಲ ಭೋಜನಗಳ ಸಲುವಾಗಿ ಹೇಳಿದನೆಂದೂ ನಿಮಗೆ ತಿಳಿದು ಬಿಟ್ಟಿರಬಹುದು.

ಅಪಥ್ಯ ಭೋಜನದಿಂದ ಅನೇಕ ವ್ಯಾಧಿಗಳು ಉತ್ಪನ್ನವಾಗುತ್ತವೆ.

ಯಾರು ಹೇಳಿಕೇಳಿ ದೂಷಿತವಾದ ಭೋಜ್ಯ ಪದಾರ್ಥಗಳನ್ನು ಮಾರು ತ್ತಾರೆಯೊ ಅವರು ನಾಗರಿಕರ ವಿಷಯದಲ್ಲಿ ಮಾಡಲಾಗುವ ಅಪರಾಧವು ಅಕ್ಷಮ್ಯವಾಗಿದೆ. ಬರಿಯ ಹಳಿಸಿ ಹಾಗೂ ಕೊಳೆತು ನಾರುವ ಪದಾರ್ಥವೇ ಅಹಿತಕರವೆಂದಲ್ಲ. ಆದರೆ ಏನನ್ನು ತಿನ್ನುವವರಿಂದ ಮನದಲ್ಲಾಗಲಿ ಶರೀರ ದಲ್ಲಾಗಲಿ ಯಾವುದೇ ಪ್ರಕಾರದ ದೋಷ ಉತ್ಪನ್ನವಾಗಿಬಿಡುವದೋ ಆ ಎಲ್ಲ ಪದಾರ್ಥಗಳೂ ಅವಾಂಛನೀಯವೇ ಆಗಿವೆ.

*　　　*　　　*　　　*

ಅಕಬರನ ತಟ್ಟೆಯಲ್ಲಿ ಸಹ ಇರುವೆಗಳಿದ್ದವಾದರೂ ಬನಾರಸೀದಾಸನು ಆ ಪೇಯ ಪದಾರ್ಥಗಳ ಬಗ್ಗೆಯೂ ಜಾಗರೂಕವಾಗಿರುವುದಕ್ಕೆ ಹೇಳಿದ್ದ ನೆಂಬುದನ್ನು ಮೇಲೆ ಕಾಣಿಸಿದ ಕಥೆಯಲ್ಲಿ ಹೇಳಲಾಗಿಲ್ಲ.

ಹೊಳೆಯುತ್ತಿರುವ ತಟ್ಟೆಯು ಕಣ್ಣುಗಳಿಗೆ ಮೋಹಗೊಳಿಸುವುದು ನಿಜ. ಅವುಗಳೊಳಗಿನ ತರಲ ಪದಾರ್ಥವು ಸ್ವಾದಿಷ್ಟ ಹಾಗೂ ನವೀನತೆ ಯನ್ನು ಕೊಡುವಂಥದೆಂದು ಕಂಡುಬರುತ್ತದೆ. ಆದರೆ ನಿಜವಾಗಿ ಅದು ಮನುಷ್ಯನಿಗೆ ಹಾನಿಕಾರಕವಾಗಿರುತ್ತದೆ. ಆದರೆ ಅವುಗಳಲ್ಲಿಯೂ ಎಲ್ಲಕ್ಕಿಂತ ಹೆಚ್ಚಾಗಿ ಹಾನಿಕಾರಕವಾಗಿರುವುದು ಸುಧಾಪಾತ್ರ.

ಮದಿರಾಪಾನವೂ ಜೂಜಿನಾಟವೂ ಪಾಪವೆಂದು ಮುಹಮ್ಮದ ಪೈಗಂಬ ರರ ಶಿಕ್ಷಣವಿತ್ತು. ಆದಕಾರಣ ಕುರಾನ ವಚನಗಳ ಮೇಲೆ ಶ್ರದ್ಧೆಯಿಡು ವವರು ಆ ಎರಡೂ ವಸ್ತುಗಳಿಂದ ದೂರ ಉಳಿಯಬೇಕು.

ಆದರೆ ಮದಿರಾಪಾನವು ಯೋಗ್ಯವೆಂದು ತಿಳಕೊಳ್ಳುವ ಜನರು ಜಗತ್ತಿ ನಲ್ಲಿ ಎಲ್ಲ ಕಡೆಗೂ ಇದ್ದಾರೆ. ನಾವು ಅವರ ಅಭಿಪ್ರಾಯವನ್ನು ಮನ್ನಿಸುತ್ತೇವೆ.

ಆದರೆ ಸೆರೆ ಕುಡಿಯುದಿರುವುದು ಸಹ ಒಂದು ಅವಗುಣವೆಂದು ಆ ಜನರು ಎಂದಿಗೂ ಹೇಳುವದಿಲ್ಲ.

ಮದ್ಯಪಾನವು ಕೆಟ್ಟದೆಂದು ಕೆಲವರು ತಿಳಿಯುತ್ತಾರೆ. ಒಳ್ಳೆಯದೆಂದೂ ಕೆಲವರು ತಿಳಿಯುತ್ತಾರೆ. ಆದರೆ ಅದನ್ನು ಕುಡಿಯದಿರುವುದು ದೋಷವೆನ್ನುವವರು ಯಾರೂ ಇಲ್ಲ ಅದನ್ನು ಕುಡಿಯುವುದು ಲಾಭದಾಯಕವಿರಲಿ ಅಥವಾ ಬಿಡಲಿ — ಈ ಮಾತು ವಿವಾದಾಸ್ಪದವಾಗಬಲ್ಲದು. ಆದರೆ ಅದನ್ನು ಕುಡಿಯದಿರುವುದು ಹಾನಿಕರವೆಂಬ ಮಾತು ಯಾರ ಬಾಯಿಂದಲೂ ಹೊರಡಲಾರದು. ಹಾಗೂ ಅದನು ಕುಡಿಯದಿರುವವರಿಂದ ದುಡ್ಡು ಉಳಿಯುತ್ತದೆಂಬ ವಿಶ್ವಾಸವು ಪ್ರತಿಯೊಬ್ಬರಿಗೂ ಇದೆ.

ಪ್ರಾಯಶಃ ಸರ್ವ ದೇಶಗಳಲ್ಲಿ ಇದರಿಂದ ಉಳಿಯುವುದರ ಸಲುವಾಗಿ ಸಮಿತಿಗಳನ್ನು ನಿರ್ಮಿಸಲಾಗಿದೆ. ಅದರ ಸದಸ್ಯರು ಮದ್ಯವನ್ನು ಮುಟ್ಟುವದಿಲ್ಲವೆಂದು ಪ್ರತಿಜ್ಞೆ ಮಾಡುತ್ತಾರೆ. ಕೆಲವು ಪಟ್ಟಣಗಳಲ್ಲಿ ಗುತ್ತಿಗೆದಾರರಿಗೆ ಅದನ್ನು ಮಾರುವುದಕ್ಕೂ ಅಡ್ಡಿಗೊಳಿಸಲಾಗಿದೆ.

ಇದಕ್ಕೆ ವಿಪರೀತವಾಗಿ ಕೆಲವು ಕಡೆ ಈ ವರೆಗೂ ಜನರು ಮದ್ಯವನ್ನೇ ಅರಿಯದವರಾಗಿದ್ದಲ್ಲೆಲ್ಲ ಇದರ ವ್ಯವಹಾರ ಆರಂಭವಾಗಿದೆ. ಉದಾಹರಣಾರ್ಥ ಭಾರತ ವರ್ಷದಲ್ಲಿ. ಎಲ್ಲಿ ನೂರುನೂರು ವರುಷಗಳಿಂದ ಇದರ ವ್ಯವಹಾರವಾಗುತ್ತಿದ್ದಿಲ್ಲವೋ ಅಲ್ಲಿ ಈಗ ಪ್ರಚಲಿತವಾಗಿ ಬಿಟ್ಟಿದೆ. ಪ್ರಾಚೀನ ಕಥೆಗಳಲ್ಲಿ ವರ್ಣಿತವಾದ ಯಾವ ರಾಕ್ಷಸನಿಗಿಂತಲೂ ಇದು ಕಡಿಮೆ ಭಯಾನಕವಾಗಿಲ್ಲ. ಆ ದುರ್ದಾಂತ ರಾಕ್ಷಸರಾದರೋ ಕೇವಲ ಶರೀರಕ್ಕೆ ಮಾತ್ರ ಹಾನಿಯನ್ನುಂಟು ಮಾಡುತ್ತಿದ್ದರು. ಆದರೆ ಈ ಸರೆಯು ವಿಚಾರಶಕ್ತಿಯೊಂದಿಗೆ ಚರಿತ್ರವನ್ನು ಸಹ ನಷ್ಟಭ್ರಷ್ಟಗೊಳಿಸಿಬಿಡುವ ಶಕ್ತಿಯನ್ನಿಡುತ್ತದೆ. ಎಲ್ಲಕ್ಕೂ ಮೊದಲು ಅದು ಶರೀರವನ್ನೇ ಹಾನಿಗೀಡು ಮಾಡುತ್ತದೆ. ಯಾವ ತಾಯಿತಂದೆಗಳು ಇದನ್ನು ಹೆಚ್ಚಾಗಿ ಉಪಯೋಗಿಸುವರೋ ಅವರ ಮಕ್ಕಳ

ಮೇಲೆ ಸಹ ಅವರ ಕೆಟ್ಟ ಪ್ರಭಾವವು ಬಹಳಷ್ಟು ಬೀಳುತ್ತದೆ. ಅದು ಬುದ್ಧಿಯನ್ನು ನಾಶಮಾಡುತ್ತದೆ. ಹಾಗೂ ಯಾರು ಮನುಷ್ಯಮಾತ್ರರ ಸೇವಕ ನಾಗಬೇಕಾಗಿದೆಯೋ ಅವರನ್ನದು ತನ್ನ ದಾಸರನ್ನಾಗಿ ಮಾಡಿಕೊಳ್ಳುತ್ತದೆ. ನಾವು ಸರ್ವರೊಳಗಿನ ಪ್ರತಿ ಒಬ್ಬರೂ ಮನುಷ್ಯಮಾತ್ರರ ಸೇವಕರಾಗಬೇಕಾಗಿದೆ. ನಾವು ನಮ್ಮ ತಿಂಡಿತೀರ್ಥಗಳಿಂದ ನಮ್ಮ ಮನವನ್ನೂ ಶರೀರವನ್ನೂ ದುರ್ಬಲಗೊಳಿಸಿಕೊಂಡರೆ ನಾವು ಅಯೋಗ್ಯ ಸೇವಕರೇ ಆಗಿಬಿಡುವೆವು. ಇಂಥ ಸೇವಕರು ತಮ್ಮ ಕಾರ್ಯ ಮಾಡುವುದರಲ್ಲಿ ಅಸಮರ್ಥರಾಗುವರು.

ತೋಳು ಕತ್ತರಿಸಿ ಹೋದರೆ ಆ ಸೈನಿಕನು ಏನಾಗುವನು? ನಾವೆಯ ನಡುಗಂಬವೇ ಮುರಿದಲ್ಲಿ ನಾವಿಕನು ಯಾವ ಕೆಲಸದವನು? ಕುದುರೆ ಕುಂಟಾದರೆ ಸವಾರನು ಏನು ಮಾಡಬಲ್ಲನು? ತನ್ನ ಅಮೂಲ್ಯ ಶಕ್ತಿಗಳ ಮೇಲಿನ ಅಧಿಕಾರವು ಹಾರಿಹೋದಲ್ಲಿ ಆ ಮನುಷ್ಯನು ಏನಾಗುವನು? ಅವನು ಪಶುವಿಗಿಂತಲೂ ಕಡೆಯಾಗುವನು. ಪಶುವು ಸಹ ತನಗೆ ಹಿತಕರವಾದುದನ್ನೇ ತಿನ್ನುತ್ತದೆ, ಕುಡಿಯುತ್ತದೆ.

ರೋಮನ್ ಕವಿಯಾದ ವರಜಿಲ್‌ನಿಗೆ ಹೊಲಗಳಲ್ಲಿರುವುದು ತೀರ ಒಲುಮೆಯ ವಿಷಯ. ಪುಷ್ಟ ಹಾಗೂ ಬಲಶಾಲಿಯಾದ ಎತ್ತುಗಳೆಂದರೆ ಅವನಿಗೆ ವಿಶೇಷ ಪ್ರಿಯವಾದವುಗಳು. ಯಾಕೆಂದರೆ ಅವು ಹೊಲದಲ್ಲಿ ನೇಗಿಲು ಎಳೆದು ಅದನ್ನು ಸುಫಲವಾಗುವಂತೆ ಸಿದ್ಧಪಡಿಸುವವು. ಎತ್ತಿನ ಶರೀರವು ತುಂಬ ಗಟ್ಟಿಮುಟ್ಟಾಗಿರುತ್ತದೆ. ಅದರ ತಾರುಣ್ಯವು ಬಹು ಪುಷ್ಟವಾಗಿರುತ್ತದೆ. ಇಡಿಯ ವರುಷವೂ ಅದು ಕಠಿಣವಾದ ಕೆಲಸ ಮಾಡುವ ಅಭ್ಯಾಸಿಯಾಗಿರುತ್ತದೆ.

ವರಜಿಲ್‌ನು ಹೇಳುವದೇನೆಂದರೆ—

"ಅದು ಮದ್ಯದಿಂದ ಹಾಗೂ ಔತಣದಿಂದ ಯಾವಾಗಲೂ ದೂರವಾಗಿರುತ್ತದೆ. ಹುಲ್ಲು ಕಡ್ಡಿಗಳನ್ನು ತಿನ್ನುತ್ತದೆ. ಹಾಗೂ ಹರಿಯುವ

ನದಿಗಳ ಹಾಗೂ ನಿರ್ಮಲ ಝರಿಗಳ ನೀರಿನಿಂದ ತನ್ನ ನೀರಡಿಕೆಯನ್ನು ಹಿಂಗಿಸುತ್ತದೆ. ಯಾವ ಚಿಂತೆಯೂ ಅದರ ಸುಖನಿದ್ರೆಯಲ್ಲಿ ತಡೆಯೊಡ್ಡುವದಿಲ್ಲ."

ಬಲಶಾಲಿಯಾಗಬೇಕಾದರೆ ಸಂಯಮಿಯಾಗು.

ದುರ್ಬಲನಾದರೆ ನೀನದರಿಂದ ರೋಸಿ ಹೋಗುವದಿಲ್ಲವೇ – ಎಂದು ನಿಮ್ಮನ್ನು ಯಾರಾದರೂ ಕೇಳುವರು.

ತಿಂಡಿತೀರ್ಥಗಳ ಸಂಯಮವು ಎಲ್ಲಿ ಬಲಶಾಲಿಗಳ ಶಕ್ತಿಯನ್ನು ವೃದ್ಧಿಗೊಳಿಸುತ್ತದೆಯೋ ಅಲ್ಲಿ ದುರ್ಬಲರ ಶಕ್ತಿಯ ರಕ್ಷಣೆಯನ್ನೂ ಮಾಡುತ್ತದೆ.

ಬನಾರಸೀದಾಸನ ಸಲಹೆಯೇನಂದರೆ—

"ಲಕ್ಷ್ಯವಿರಲಿ ತಿನ್ನುವಲ್ಲಿ"

"ಲಕ್ಷ್ಯವಿರಲಿ ಕುಡಿಯುವಲ್ಲಿ"

೭

# ದೂರದರ್ಶಿತ್ವ



ಆ ಹಿಂದು ಯುವಕನು ಬಾಣಬಿಟ್ಟು ಗುರಿಯನ್ನು ವೇಧಿಸುತ್ತಲೇ ಒಂದು ನುಡಿಯು ಹೊರಬಿತ್ತು— “ಭಲೆ! ಒಳಿತಾಗಿ!!”

ಯಾರೋ ನುಡಿದರು— “ಅಹುದು. ಆದರೆ ಇನ್ನೂ ಹಗಲಿನ ಬೆಳಕಿದೆ. ಆ ಧನುರ್ಧಾರಿಯು ಗುರಿಯನ್ನು ಚೆನ್ನಾಗಿ ಇಡಬಲ್ಲನು. ಆದರೆ ದಶರಥನಷ್ಟು ಇವನು ಜಾಣನಲ್ಲ.”

“ಆದರೆ ದಶರಥನು ಇನ್ನು ಏನು ಮಾಡಬಲ್ಲನು?”

“ಅವನು ಶಬ್ದವೇಧಿಯಾಗಿದ್ದಾನೆ.”

“ಅಂದರೆ?”

“ಅವನು ಶಬ್ದದ ಆಧಾರದಿಂದ ಗುರಿ ಹೊಡೆಯುತ್ತಾನೆ.”

“ನೀವನ್ನುವುದರ ಅಭಿಪ್ರಾಯವೇನು?”

“ಅವನು ಕತ್ತಲೆಯಲ್ಲಿ ಬಾಣವನ್ನು ನಡೆಸಬಲ್ಲನು. ಇರುಳು ಅಡವಿಯಲ್ಲಿ ಹೋಗಿ ಅವನು ಸಪ್ಪುಳವನ್ನು ಆಲಿಸುತ್ತಾನೆ. ಪಶುಗಳ ಹೆಜ್ಜೆ ಇಲ್ಲವೆ ಪಕ್ಷಿಗಳ ಉಲುಹಿನಿಂದ ಅವನು ಯಾವ ಬೇಟೆಯನ್ನು ಹೊಡೆಯುವ

ದಿದೆಯೆಂಬುದನ್ನು ಗುರುತಿಸಿ ಅವನು ಬಾಣವನ್ನು ಬಿಡುತ್ತಾನೆ. ಅವನು ನೇರವಾಗಿ ಗುರಿಯನ್ನು ವೇಧಿಸಿಬಿಡುತ್ತಾನೆ. ಸ್ಪಷ್ಟ ಪ್ರಕಾಶದಲ್ಲಿ ಗುರಿಯನ್ನು ಸಾಧಿಸುತ್ತಾನೆ. "

ಈ ಪ್ರಕಾರ ಅಯೋಧ್ಯೆಯ ರಾಜಕುಮಾರನಾದ ದಶರಥನ ಕೀರ್ತಿಯು ನಾಲ್ಕೂ ದಿಕ್ಕಿನಲ್ಲಿ ಹಬ್ಬಿಬಿಟ್ಟಿತ್ತು.

ತನ್ನ ಈ ಶಬ್ದವೇಧಿಯ ಚಾತುರ್ಯದ ಬಗ್ಗೆ ಅವನಿಗೆ ಹೆಮ್ಮೆಯಿತ್ತು. ಜನರ ಬಾಯಿಂದ ತನ್ನ ಪ್ರಶಂಸೆಯನ್ನು ಕೇಳಿ ಅವನು ಸಂತುಷ್ಟನಾಗಿ ಬಿಡುತ್ತಿದ್ದನು. ಸಂಜೆಯಾಗುತ್ತಲೆ ಅವನು ಒಬ್ಬನೇ ತನ್ನ ರಥದಲ್ಲಿ ಕುಳಿತುಕೊಂಡು ಬೇಟೆಯನ್ನರಸುತ್ತ ನಿಬಿಡವಾದ ಅರಣ್ಯದ ಕಡೆಗೆ ಹೋಗುತ್ತಿದ್ದನು. ಒಮ್ಮೊಮ್ಮೆ ಅವನಿಗೆ ಕಾಡೆಮ್ಮೆಗಳು ಇಲ್ಲವೆ ನದಿಯ ದಂಡೆಯಲ್ಲಿ ನೀರು ಕುಡಿಯಲು ಬರುವ ಆನೆಯ ಹೆಜ್ಜೆಗಳ ಸಪ್ಪುಳವು ಕೇಳಿಸುವದು. ಆದರೆ ಒಮ್ಮೊಮ್ಮೆ ಚಿಗರಿಯ ಸುಳುಹು ಇಲ್ಲವೆ ಕರಡಿಗಳ ಸತರ್ಕ ಪದ ಧ್ವನಿಯು ಕೇಳಿಬರುತ್ತಿತ್ತು.

ಒಂದು ದಿನ ರಾತ್ರಿಯಲ್ಲಿ ಅವನು ಮರೆಗಳಲ್ಲಿ ಒಣಗಿದ ಎಲೆಗಳ ಕಣ-ಕಣಾಟ ಹಾಗೂ ನೀರಿನ ಜುಳುಜುಳು ಶಬ್ದ ಇವುಗಳನ್ನು ಲಕ್ಷ್ಯಗೊಟ್ಟು ಕೇಳುತ್ತಿದ್ದನು. ಅವನಿಗೆ ಒಮ್ಮಿಂದೊಮ್ಮೆ ಸರೋವರದ ತಟದಲ್ಲಿ ಯಾರೋ ಅಡಿಯಾಡುವ ಸಪ್ಪುಳವು ಕೇಳಬಂತು. ಕತ್ತಲೆಯಲ್ಲಿ ಅವನಿಗೆ ಕೆಲವೊಂದು ಕಲ್ಪನೆಗಳು ಆಗುತ್ತಿರಲಿಲ್ಲ. ಆದರೆ ದಶರಥನು ಶಬ್ದವೇಧಿಯಲ್ಲವೇ? ಅವನಿಗೆ ಧ್ವನಿಯೇ ಆಧಾರವಾಗಿತ್ತು. ನಿಶ್ಚಯವಾಗಿಯೂ ಅದು ಆನೆಯೆಂದು ಅವನೆಣಿಸಿದನು. ಅವನು ಬಾಣಬಿಟ್ಟನು. ಆಗಲೇ ಒಂದು ಆಕ್ರೋಶ ಪೂರ್ಣವಾದ ಧ್ವನಿ ಹೊರಬಿದ್ದಿತು.

" ಕಾಪಾಡಿರಿ ಕಾಪಾಡಿರಿ ! ಯಾರೋ ನನ್ನನ್ನು ಹೊಡೆದುಬಿಟ್ಟರು. " ದಶರಥನು ಬೆಚ್ಚಿಬಿದ್ದನು. ಅವನ ಕೈಯಿಂದ ಬಿಲ್ಲುಬಾಣಗಳು ಕಳಚಿ

ಬಿದ್ದವು. ಒಂದು ಭಯಮಿಶ್ರಿತವಾದ ನಡುಕು ಅವನ ಮೈಯಲ್ಲೆಲ್ಲ ದಾಳಿಯಿಟ್ಟಿತು. ನಾನೇನು ಮಾಡಿಬಿಟ್ಟೆ ? ಅರಣ್ಯವನ್ನು ಸೀಳಿಹಾಕುವ ಆ ಸರೋವರದ ಕಡೆಗೆ ಓಡಿದನು. ಸರೋವರದ ದಂಡೆಯಲ್ಲಿ ಒಬ್ಬ ಯುವಕನು ರಕ್ತದಲ್ಲಿ ತೊಯ್ದು ಬಿದ್ದಿದ್ದನು. ಕೂದಲು ಚೆಲ್ಲಾಪಿಲ್ಲಿಯಾಗಿದ್ದವು. ಕೈಯಲ್ಲಿ ಅವನದೊಂದು ಕೊಡವಿತ್ತು. ಅದನ್ನು ಅವನು ಇದೇ ಈಗ ನೀರಿನಿಂದ ತುಂಬಿದ್ದನು.

“ ಮಹಾಶಯಾ ” ಎಂದು ಅವನು ಕಿರಿಚಿದನು.— “ ನೀವೇ ಆ ಘಾತಕ ಬಾಣವನ್ನು ಬಿಟ್ಟಿರಾ ? ನಾನು ನಿಮಗೆ ಅದೇನು ಕೇಡು ಮಾಡಿದ್ದೆನೆಂದು ನೀವು ನನ್ನೊಡನೆ ಹೀಗೆ ವ್ಯವಹರಿಸಿದಿರಿ ? ನಾನೊಬ್ಬ ಋಷಿ-ಕುಮಾರನು. ನನ್ನ ಮುಪ್ಪಿನ ತಾಯಿತಂದೆಗಳು ಕುರುಡರು. ಅವರನ್ನು ನೋಡಿಕೊಳ್ಳುವ ಹಾಗೂ ಆವಶ್ಯಕತೆಗಳನ್ನು ಪೂರ್ತಿಗೊಳಿಸುವ ಕೆಲಸವನ್ನು ನಾನೇ ಮಾಡುತ್ತೇನೆ. ನಾನು ಅವರ ಸಲುವಾಗಿಯೇ ನೀರು ಒಯ್ಯಬೇಕೆಂದು ಬಂದಿದ್ದೆ. ಆದರೆ ಈಗ ನಾನು ಅವರ ಇನ್ನುಳಿದ ಸೇವೆಯನ್ನು ಮಾಡಲಾರೆನು. ಆ ದಾರಿಯಿಂದ ನೀವು ಅವರ ಗುಡಿಸಲ ಕಡೆಗೆ ಹೋಗಿರಿ. ಹಾಗೂ ನಡೆದುದೆಲ್ಲವನ್ನು ಅವರಿಗೆ ಹೇಳಿಕೊಡಿರಿ. ಆದರೆ ಹೋಗುವ ಮೊದಲು ನನ್ನ ಎದೆಯೊಳಗಿಂದ ಈ ಬಾಣವನ್ನು ಕಿತ್ತಿತೆಗೆದು ಹೋಗಿರಿ. ಇದರಿಂದ ನನಗೆ ಬಹಳ ತೊಂದರೆಯಾಗುತ್ತಿದೆ. ”

ದಶರಥನು ಧಾವಿಸಿ ಬಾಣವನ್ನು ಕಿತ್ತಿದನು. ಯುವಕನು ಕೊನೆಯ ಶ್ವಾಸವನ್ನು ತೆಗೆದುಕೊಂಡು ಪ್ರಾಣಬಿಟ್ಟನು.

ರಾಜಕುಮಾರನು ಆ ಕೊಡವನ್ನು ತುಂಬಿಕೊಂಡು, ಸತ್ತವನಿಂದ ತೋರಿಸಲ್ಪಟ್ಟ ದಾರಿ ಹಿಡಿದು ನಡೆದನು. ಹಾಗೆಯೇ ಗುಡಿಸಲವನ್ನು ತಲಪಿದನು. ತಂದೆ ಕೇಳಿದನು—

“ ನನ್ನ ಮಗುವೇ, ಇಂದು ಇಷ್ಟೇಕೆ ತಡವಾಯಿತು ? ಆ ಸರೋವರದಲ್ಲಿ ಜಳಕ ಮಾಡಲಿಕ್ಕೆ ಹೋಗಿದ್ದಿಯಾ ? ಎಲ್ಲಿಯೋ ನೀನು ಯಾವುದಾದರೂ

ಗಂಡಾಂತರಕ್ಕೆ ಸಿಕ್ಕಿಕೊಂಡಿಲ್ಲವೇ ಎಂದು ನಾವು ಅಂಜಿಕೊಂಡಿದ್ದೆವು. ಆದರೆ ನೀನು ಏಕೆ ಮರುಮಾತಾಡಲೊಲ್ಲೆ ? ”

ನಡುಗುವ ದನಿಯಲ್ಲಿ ದಶರಥನು ನುಡಿದನು—

“ ಮಹಾತ್ಮರೇ, ನಾನು ನಿಮ್ಮ ಮಗನಲ್ಲ. ನಾನೊಬ್ಬ ಕ್ಷತ್ರಿಯನು. ನನಗೆ ಈ ವರೆಗೆ ನನ್ನ ಧನುರ್ವಿದ್ಯೆಯ ಬಗ್ಗೆ ಬಹಳ ಗರ್ವವಿತ್ತು. ರಾತ್ರಿಯಲ್ಲಿ ಬೇಟೆಯನ್ನರಸುತ್ತ ಕುಳಿತಿದ್ದೆನು. ಸರೋವರ ತೀರದಲ್ಲಿ ಆನೆ ನೀರು ಕುಡಿಯುವಂತೆ ಸದ್ದಾಗತೊಡಗಿದೆಯೆಂದು ನನಗೆ ತಿಳಿಯಿತು. ನಾನು ಬಾಣ ಬಿಟ್ಟೆನು. ಅಯ್ಯಯ್ಯೊ ! ಆ ಬಾಣವು ನಿಮ್ಮ ಮಗನಿಗೆ ಹೋಗಿ ತಗುಲಿತು. ಹೇಳಿರಿ ಹೇಳಿರಿ. ಯಾವ ಪ್ರಕಾರದಿಂದ ನನ್ನ ಪಾಪಕ್ಕೆ ಪ್ರಾಯಶ್ಚಿತ್ತವನ್ನು ಹೊಂದಲಿ ? ”

ಮುದುಕ-ಮುದಿಕೆ ಇಬ್ಬರು ಅಯ್ಯೋ-ಅಯ್ಯೋ ಎಂದು ಅಳ್ಳರಾಸ ತೊಡಗಿದರು. ಅಲ್ಲಿ ಅವರ ಒಂಟಿಗನಾದ ಮಗನು ಬಿದ್ದುಕೊಂಡಿದ್ದನು. ಅಲ್ಲಿಗೆ ಹೋಗಿ ಅವರು ಶವದ ಬಳಿಯಲ್ಲಿ ಮಂತ್ರೋಚ್ಚಾರಣ ಮಾಡಿ ಅದರ ಮೇಲೆ ನೀರು ಚಿಮುಕಿಸಿದರು. ಬಳಿಕ ಋಷಿಯು ಹೇಳಿದನು—

“ ಕೇಳು ದಶರಥ ! ನಿನ್ನ ತಪ್ಪಿನಿಂದ ನಾವಿಂದು ನಮ್ಮ ಪ್ರೀತಿಯ ಪುತ್ರನ ಸಲುವಾಗಿ ಕಣ್ಣೀರು ಹರಿಸುತ್ತಿದ್ದೇವೆ. ಒಂದು ದಿನ ನೀನು ಸಹ ನಿನ್ನ ಪ್ರೀತಿಯ ಪುತ್ರನ ಸಲುವಾಗಿ ವಿಲಾಪಿಸುವಿ. ಬಹಳ ವರುಷ ಕಳೆಯುವದಾದರೂ ಈ ಶಿಕ್ಷೆ ನಿನಗೆ ಆಗತಕ್ಕದ್ದೇ. ”

ಹೆಣವನ್ನು ಸುಡುವುದಕ್ಕಾಗಿ ಅವರು ಚಿತೆಯನ್ನು ಸಿದ್ಧಗೊಳಿಸಿದರಲ್ಲದೆ ತಾವು ಸಹ ಅದರಲ್ಲಿ ಕುಳಿತುಕೊಂಡು ಉರಿದು ಸತ್ತುಹೋದರು.

ಕಾಲಕಳೆದು ಹೋಯಿತು. ದಶರಥನು ಅಯೋಧ್ಯೆಯ ರಾಜನಾಗಿ ಬಿಟ್ಟನು. ಹಾಗೂ ಕೌಶಲ್ಯೆಯೊಡನೆ ಅವನ ಮದುವೆಯಾಯಿತು. ಬಳಿಕ ಅವನಿಗೆ ಯಶಸ್ವಿ ರಾಮನಂಥ ಮಗನು ಹುಟ್ಟಿದನು.

ರಾಜನ ಎರಡನೇ ರಾಣಿಯಾದ ಕೈಕೇಯಿ ಹಾಗೂ ಆಕೆಯ ದಾ
ಇವರನ್ನುಳಿದು ಸರ್ವಪ್ರಜೆಗಳು ರಾಮನನ್ನು ಪ್ರೀತಿಸುತ್ತಿದ್ದರು. 
ಇಬ್ಬರು ಸ್ತ್ರೀಯರು ಗುಪ್ತಕಟ್ಟು ಮಾಡಿಕೊಂಡು ಸಜ್ಜನನಾದ ರಾಮನಿ
ಬಹು ಹಾನಿಯನ್ನು ತಂದಿಟ್ಟರು. ಅವರ ಫಿತೂರಿಯಿಂದ ಅವನು ಹದಿನಾಲ್ಕು
ವರುಷಗಳವರೆಗೆ ಅರಣ್ಯಕ್ಕೆ ಕಳಿಸಲ್ಪಟ್ಟನು.

ಆ ಮುಪ್ಪಿನ ತಾಯಿತಂದೆಗಳು, ನಡುರಾತ್ರಿಯಲ್ಲಿ ಸರೋವರ ತೀ
ದಲ್ಲಿ ಪ್ರಾಣ ಬಿಟ್ಟ ತಮ್ಮ ತರುಣಪುತ್ರನ ಸಲುವಾಗಿ ಅರಣ್ಯದಲ್ಲಿ
ವಿಲಾಪಿಸಿದ ಹಾಗೆ ದಶರಥನು ಆಗ ಪುತ್ರನ ಅಗಲಿಕೆಯಲ್ಲಿ ವಿಲಾಪಿಸಿದನು.

ದಶರಥನಿಗೆ ತನ್ನ ವಿದ್ಯೆಯ ಬಗ್ಗೆ ಅದೆಷ್ಟು ಹೆಮ್ಮೆಯುಂಟಾಗಿ
ಬಿಟ್ಟಿತ್ತೆಂದರೆ—ಆ ಕಾಲಕ್ಕೆ ಅವನಲ್ಲಿ ಆ ದೂರದರ್ಶಿತ್ವವು ಸಹ ಉಳಿಯಲಿಲ್ಲ.
ಆದರಿಂದ ಅವನು ಕತ್ತಲಲ್ಲಿ ಯಾವನಾದರೂ ಮನುಷ್ಯನನ್ನು ಸಹ ಗಾಯ-
ಗೊಳಿಸಬಹುದೆಂಬ ವಿಚಾರ ಮಾಡಲಿಕ್ಕಾಗುತ್ತಿತ್ತು. ತನ್ನ ಶಬ್ದವೇಧಿಯ
ಚಾತುರ್ಯದ ವಿಷಯದಲ್ಲಿ ಇಂಥ ದಡ್ಡತನದಿಂದ ತುಂಬಿದ ಹೆಮ್ಮೆ-
ಯುಂಟಾಗಿದ್ದರಿಂದ ಅವನು ಕೇವಲ ಹಗಲು ಬೆಳಕಿನಲ್ಲಿಯೇ ಬಾಣ ಹೊಡೆ
ಯುವ ಅಭ್ಯಾಸ ಮಾಡುವುದು ಅವನಿಗೆ ಒಳ್ಳೆಯದಿತ್ತು. ಅದರಿಂದ
ಯಾರೂ ಕಷ್ಟಕ್ಕೀಡಾಗುತ್ತಿದ್ದಿಲ್ಲ. ಆದರೆ ಅವನು ಅದೂರದರ್ಶಿಯಾಗಿದ್ದನು.

* * * *

ಒಮ್ಮೆ ಎರಡು ಮುಪ್ಪಿನ ರಣಹದ್ದುಗಳು ಬಹುಸಂಕಟಾವಸ್ಥೆಯಲ್ಲಿ
ದ್ದವು. ಕಾಶಿಯ ಒಬ್ಬ ವರ್ತಕನಿಗೆ ಅವುಗಳ ಮೇಲೆ ದಯೆ ಹುಟ್ಟಿತು.
ಅವನು ಅವುಗಳನ್ನು ಒಂದು ಒಣಗಿದ್ದ ಸ್ಥಳದಲ್ಲಿ ತಕ್ಕೊಂಡು ಬಂದನು.
ಬೆಂಕಿ ಹೊತ್ತಿಸಿ ಅವನು ಅವುಗಳಿಗೆ ಕಾವುಗೊಳಿಸಿದನು. ಹಾಗೂ ಸತ್ತ
ದನಗಳನ್ನು ಸುಡಲಾಗುವ ಸ್ಥಳದಿಂದ ಮಾಂಸದ ತುಣುಕುಗಳನ್ನು ತಂದು
ಅವುಗಳ ಹೊಟ್ಟೆಗೆ ಹಾಕಿದನು.

ಮಳೆಗಾಲ ಬಂದ ಮೇಲೆ ಆ ರಣಹದ್ದುಗಳು ಪರ್ವತ ಪ್ರದೇಶದ ಕಡೆಗೆ ಹಾರಿಹೋದವು. ಆಗ ಅವು ತುಂಬ ಸ್ವಸ್ಥ ಹಾಗೂ ಹೃಷ್ಟಪುಷ್ಟ ವಾಗಿದ್ದವು. ಬನಾರಸದ ವರ್ತಕನ ಉಪಕಾರವನ್ನು ತೀರಿಸಬೇಕೆಂದು ಅವು ನಿಶ್ಚಯಿಸಿದವು. ತಮ್ಮ ದಯಾಳು ಮಿತ್ರನಿಗೆ ಕೊಡುವುದಕ್ಕಾಗಿ ಅಲ್ಲೊಂದು ಇಲ್ಲೊಂದು ವಸ್ತ್ರಗಳನ್ನು ಸಂಗ್ರಹಿಸಬೇಕೆಂದು ಅವು ಒಂದು ಮನೆಯಿಂದ ಇನ್ನೊಂದು ಮನೆಗೆ, ಒಂದು ಊರಿನಿಂದ ಇನ್ನೊಂದೂರಿಗೆ ನೆಗೆಯುತ್ತ ಹೊರಟವು. ಹಾಗೂ ಯಾರಾದರೂ ಗಾಳಿಯಲ್ಲಿ ಅರಿವೆಗಳನ್ನು ಒಣಗಲು ಹಾಕಿದ್ದರೆ ಅವುಗಳನ್ನು ಎತ್ತಿಕೊಂಡು ಒಯ್ಯುವವು. ಮತ್ತು ಅವುಗಳನ್ನು ಆ ವರ್ತಕನ ಮನೆಯಲ್ಲಿ ಬಿಟ್ಟುಬರುವವು. ವರ್ತಕನು ಅವುಗಳ ಸದುದ್ದೇಶವನ್ನು ಮನ್ನಿಸುತ್ತಿದ್ದನೇನೋ ಸರಿ. ಆದರೆ ಕದ್ದು ತಂದ ಆ ಅರಿವೆಗಳನ್ನು ಅವನು ತನ್ನ ವ್ಯವಹಾರಕ್ಕೂ ಬಳಸುತ್ತಿರಲಿಲ್ಲ; ಹಾಗೂ ಅವುಗಳನ್ನು ಮಾರುತ್ತಲೂ ಇರಲಿಲ್ಲ. ಅವನು ಅವುಗಳನ್ನು ಒಂದು ಕಡೆಗೆ ಜೋಕೆಯಾಗಿ ಇಟ್ಟುಬಿಡುತ್ತಿದ್ದನು.

ಆ ಎರಡು ಹದ್ದುಗಳನ್ನು ಹಿಡಿಯಬೇಕೆಂದು ಎಲ್ಲ ಕಡೆಯಲ್ಲಿಯೂ ಬಲೆಗಳನ್ನು ಹಾಕಿದರು. ಒಂದು ದಿನ ಅವುಗಳಲ್ಲೊಂದನ್ನು ಹಿಡಿದರು. ಮತ್ತು ಅದನ್ನು ರಾಜನೆದುರಿಗೆ ತಂದು ನಿಲ್ಲಿಸಿದರು. ರಾಜನು ಅದಕ್ಕೆ— "ನೀನು ನನ್ನ ಪ್ರಜೆಗಳಲ್ಲಿ ಕದಿಯುತ್ತಿರುವುದೇಕೆ ?" ಎಂದು ಕೇಳಿದನು.

ಪಕ್ಷಿಯು ಉತ್ತರ ಕೊಟ್ಟಿತು— "ಒಬ್ಬ ವರ್ತಕನು ನನ್ನ ಹಾಗೂ ನನ್ನ ಬಂಧುವಿನ ಜೀವ ಉಳಿಸಿದ್ದನು. ಅವನ ರಿಣ ತೀರಿಸಬೇಕೆಂದು ನಾವು ಕೆಲವೊಂದು ವಸ್ತ್ರಗಳನ್ನು ಅವನ ಸಲುವಾಗಿ ಸಂಗ್ರಹಿಸಿದೆವು."

ಬಳಿಕ ವರ್ತಕನನ್ನು ವಿಚಾರಿಸುವ ಸರತಿ ಬಂತು. ಅವನು ಸಹ ರಾಜನ ಮುಂದೆ ಬಂದು ನಿಂತನು. ಅವನು ಹೇಳಿದ್ದೇನಂದರೆ—

"ಸ್ವಾಮಿ, ರಣಹದ್ದುಗಳು ನಿಜವಾಗಿಯೂ ನನಗೆ ಬಹಳಷ್ಟು ವಸ್ತ್ರ ಗಳನ್ನು ತಂದುಕೊಟ್ಟಿವೆ. ಆದರೆ ನಾನು ಅವೆಲ್ಲವನ್ನೂ ಒಂದು ಸ್ಥಳದಲ್ಲಿ

ಇಟ್ಟುಬಿಟ್ಟಿದ್ದೇನೆ. ನಾನು ಅವುಗಳನ್ನು ಅವುಗಳ ಒಡೆಯರಿಗೆ ಮರಳಿ ಕೊಡಲಿಕ್ಕೆ ಸಿಧ್ಧನಿದ್ದೇನೆ.''

ರಾಜನು ರಣಹದ್ದುಗಳನ್ನು ಕ್ಷಮಿಸಿದನು. ಯಾಕೆಂದರೆ ಅವು ಆ ಕಾರ್ಯವನ್ನು ಪ್ರತ್ಯುಪಕಾರದ ಸಲುವಾಗಿ ಮಾಡಿದ್ದವು. ಅಹುದು. ಅವುಗಳಲ್ಲಿ ವಿಚಾರಶಕ್ತಿಯು ಅಭಾವವಿತ್ತು. ಆದರೆ ವರ್ತಕನು ಅವುಗಳ ಸಲುವಾಗಿ ಯಾವ ಕಷ್ಟಕ್ಕೂ ಈಡಾಗಬೇಕಾಗಲಿಲ್ಲ. ಇದರಲ್ಲಿ ಅವನ ದೂರದೃಷ್ಟಿ ಇತ್ತು.

* * * *

ಜಪಾನಿಯರ ಮನೆಗಳಲ್ಲಿ ದೂರದರ್ಶಿತ್ವದ ವಿಚಾರವನ್ನು ಪ್ರತ್ಯಕ್ಷ ಮೂರ್ತಿಮಂತವಾಗಿ ನೋಡಲಿಕ್ಕೆ ಸಿಗುತ್ತದೆ.

ಅವರ ಒಂದು ಮಂದಿರದಲ್ಲಿ ಮಹಾತ್ಮಾ ಬುದ್ಧರ ಒಂದು ವಿಶೇಷ ಪ್ರಕಾರದ ಮೂರ್ತಿ ಆದೆ. ಅವರು ಒಂದು ಕಮಲದ ಹೂವಿನ ಮೇಲೆ ಧ್ಯಾನಾವಸ್ಥೆಯಲ್ಲಿ ಕುಳಿತಿದ್ದಾರೆ. ಅವರೆದುರಿಗೆ ಮೂರು ಸಣ್ಣ ಮಂಗಗಳಿವೆ. ಒಂದರ ಕೈಗಳು ಅದರ ಕಣ್ಣುಗಳ ಮೇಲಿವೆ. ಮತ್ತೊಂದರವು ಎರಡೂ ಕಿವಿಗಳ ಮೇಲೆ. ಹಾಗೂ ಮೂರನೇದು ಕೈಗಳಿಂದ ತನ್ನ ಬಾಯಿಯನ್ನೇ ಮುಚ್ಚಿಕೊಂಡಿದೆ. ಆ ಮೂರೂ ಮಂಗಗಳ ಅರ್ಥವು ನಿಮಗೆ ತಿಳಿಯು-ವುದೇ? ಮೊದಲನೇದು ತನ್ನ ಸೂಚನೆಗಳಿಂದ ಹೇಳುತ್ತಿರುವದೇನಂದರೆ—"ನಾನು ಕೆಡಕು ಹಾಗೂ ಅಂದಗೇಡಿಯಾದ ವಸ್ತುಗಳನ್ನು ನೋಡುವದಿಲ್ಲ.'' ಎರಡನೇದು ಹೇಳುವದೇನಂದರೆ—"ನಾನು ಅಂಥ ಮಾತುಗಳನ್ನು ಕಿವಿಯಿಂದ ಕೇಳುವದಿಲ್ಲ.'' ಹಾಗೂ ಮೂರನೇದು—"ನಾನು ಅಂಥ ಮಾತುಗಳನ್ನು ನುಡಿಯುವದಿಲ್ಲ.''

ಈ ಪ್ರಕಾರ ಬುದ್ಧಿವಂತ ಮನುಷ್ಯರು ನೋಡಿದ್ದರಲ್ಲಿ ಕೇಳಿದ್ದರಲ್ಲಿ ನುಡಿಸಿದ್ದರಲ್ಲಿ ವಿಚಾರಪೂರ್ಣತೆಯು ಬಹಳ ಇರುತ್ತದೆ.

ಅವರು ಹವಾಮಾನವನ್ನು ಕುರಿತು ವಿಚಾರಿಸುತ್ತಾರೆ. ನಾಳಿನ ದಿವಸದ ವಿಷಯವನ್ನು ವಿಚಾರಿಸುತ್ತಾರೆ. ಹಾಗೂ ತಮಗೆ ದಾರಿ ತೋರಿ ಬರದಿದ್ದರೆ ಅವರು ಯಾರನ್ನಾದರೂ ಕೇಳಿಕೊಳ್ಳುತ್ತಾರೆ.



# ಸತ್ಯತೆ

ಒಂದು ಸಿಂಹ, ಒಂದು ತೋಳ ಹಾಗೂ ಒಂದು ನರಿ ಇವು ಬೇಟೆ-ಯಾಡುತ್ತ ಅರಣ್ಯದಲ್ಲಿ ಕೂಡಿದವು. ಅವು ಒಂದು ಕತ್ತೆ, ಒಂದು ಚಿಗರಿ, ಒಂದು ಮೊಲ ಹೀಗೆ ಮೂರು ಪ್ರಾಣಿಗಳನ್ನು ಹೊಡೆದವು.

ಬೇಟೆಗಳನ್ನು ಮುಂದೆ ಇರಿಸಿಕೊಂಡು ಸಿಂಹವು ತೋಳನಿಗೆ ಅಂದಿತು-"ಮಿತ್ರನಾದ ತೋಳಪ್ಪಾ, ಈ ಬೇಟೆಗಳ ಹಂಚುಪಾಲನ್ನು ಯಾವ ಪ್ರಕಾರ ಮಾಡಬೇಕು ? ಹೇಳಲ್ಲಾ!"

ತೋಳನು ಮರುನುಡಿಯಿತು—"ಈ ಮೂರು ಪಶುಗಳನ್ನು ಕಡಿದು ಕತ್ತರಿಸುವ ಕಾರಣವಿಲ್ಲ. ನೀವು ಕತ್ತೆಯನ್ನು ತೆಗೆದುಕೊಳ್ಳಿರಿ. ನರಿಯು ಮೊಲವನ್ನು ತಕ್ಕೊಳ್ಳಲಿ. ಮತ್ತು ನಾನಾದರೋ ಚಿಗರಿಯಿಂದಲೇ ಸಂತುಷ್ಟನಾಗುವೆನು."

ಈ ಮಾತಿನ ಉತ್ತರದಲ್ಲಿ ಸಿಂಹವು ಒಂದು ಸಿಟ್ಟುತುಂಬಿದ ಗರ್ಜನೆ ಮಾಡಿತು. ಹಾಗೂ ತೋಳನ ಸಲಹೆಗೆ ಒಪ್ಪಿಗೆಯಿಲ್ಲವೆನ್ನುವಂತೆ ಪಂಜರದ

ಒಂದೇಟಿನಿಂದ ಅದರ ಕುತ್ತಿಗೆ ಹಿಸುಕಿತು. ಬಳಿಕ ಅದು ನರಿಯ ಕಡೆಗೆ ಹೊರಳಿ ನುಡಿಯಿತು.—

"ಇನ್ನು ನನ್ನ ಪ್ರೀತಿಯ ತಂಗಿಯಾದ ನರಿಯಕ್ಕಾ, ನಿನ್ನ ಅಭಿಪ್ರಾಯವೇನು?"

"ಇದೇನೋ ಬಹಳ ಸೇರವಾದ ಮಾತಿದೆ, ಶ್ರೀಮಂತರೇ!" ಎನ್ನುತ್ತ ನರಿಯು ಒಂದು ಉದ್ದವಾಗಿ ದಂಡನಮಸ್ಕಾರ ಮಾಡಿ ಹೇಳಿತು—"ನಾಳಿನ ಬೆಳಗಿನೂಟಕ್ಕೆ ನೀವು ಕತ್ತೆಯನ್ನು ಉಪಯೋಗಿಸಿರಿ. ಹಾಗೂ ಚಿಗರಿಯನ್ನು ಸಂಜೆಯೂಟಕ್ಕೆ ಇಟ್ಟುಕೊಳ್ಳಿರಿ. ಇನ್ನುಳಿದ ಮೊಲವನ್ನು ಎರಡು ಊಟಗಳ ನಡುವೆ ತಿಂದು ನೀರು ಕುಡಿಯಲು ತಕ್ಕೊಳ್ಳಿರಿ."

"ಬಹಳ ಒಳ್ಳೇದು" ಎಲ್ಲಕ್ಕೆಲ್ಲಾ ಬೇಟೆಗಳು ತನಗೊಬ್ಬನಿಗೇ ಸಿಗುವುದನ್ನು ಕಂಡು ಸಿಂಹವು ಸಂತೋಷಪಟ್ಟು ನುಡಿಯಿತು—"ಭಾಪು! ಇಂಥ ಬುದ್ಧಿವಂತಿಕೆಯ ಹಾಗೂ ನ್ಯಾಯಪ್ರಿಯತೆಯ ಮಾತುಗಳನ್ನು ನುಡಿಯಲು ನೀನು ಯಾರಿಂದ ಕಲಿತಿರುವಿ?"

"ತೋಳನಿಂದ" ಎಂದು ನರಿಯು ಚಾತುರ್ಯಪೂರ್ವಕವಾಗಿ ಉತ್ತರ ಕೊಟ್ಟಿತು. ನರಿಯು ಹೀಗೆ ನುಡಿದ ಕಾರಣವೇನು? ಅದು ತನ್ನ ಸತ್ಯ ಭಾವನೆಯನ್ನು ವ್ಯಕ್ತಮಾಡಿತೇ? ಇಲ್ಲ. ವ್ಯಾಕುಲವೂ ಆಗಿರಲಿಲ್ಲ. ಹಾಗಾದರೆ ಆ ಸಿಂಹವನ್ನು ಸಂತುಷ್ಟಗೊಳಿಸುವ ಸತ್ಯವಾದ ಅಭಿಲಾಷೆಯನ್ನು ಇಟ್ಟುಕೊಂಡಿದ್ದಿತೇ? ಅದೂ ಇಲ್ಲ. ಅದು ಭಯವಶವಾಗಿಯೇ ಹಾಗೆ ನುಡಿಯಿತು. ಹಾಗೂ ಆ ಕಾರಣದಿಂದಲೇ ಸ್ಪಷ್ಟವಾಗಿ ಒಳಿತು-ಕೆಡಕು ಎನ್ನಲಿಕ್ಕಾಗಲಿಲ್ಲ. ಆದರೆ ಅದರ ಹೇಳಿಕೆಯು ಸತ್ಯವಾಗಿರಲಿಲ್ಲವೆಂದೇ ಒಪ್ಪಿಕೊಳ್ಳಬೇಕಾಗುವದು. ಅದು ಕೇವಲ ಅದರ ಚಾತುರ್ಯವೇ ಆಗಿತ್ತು. ಮತ್ತು ಸಿಂಹವು ಸಹ ನರಿಯು ನಿರ್ಣಯಿಸಿದ್ದನ್ನೇ ಸರಿಯೆಂದ

ಕಾರಣವೇನೆಂದರೆ—ಅದಕ್ಕೆ ಮಾಂಸದ ಮೇಲೆ ಪ್ರೀತಿಯಿತ್ತು; ಸತ್ಯಕ್ಕಾಗಿ ಅಲ್ಲ.

ಅಬು ಅಬ್ಬಾಸ ಎಂಬ ಹೆಸರಿನ ಒಬ್ಬ ಮುಸಲ್ಮಾನ ಲೇಖಕನು ರಾಜಾ ಸುಲೇಮಾನನ ಕೀರ್ತಿಕಥೆಯನ್ನು ಬರೆದಿದ್ದಾನೆ. ಆ ರಾಜನು ಯಹುದಿಯರ ಪವಿತ್ರನಗರವಾದ ಜರೂಸಲೇಮುವನ್ನು ಆಳುತ್ತಿದ್ದನು. ಅವನ ಆಸ್ಥಾನ ಗೃಹದಲ್ಲಿ ಆರುನೂರು ಆಸನಗಳಿದ್ದವು. ಮುನ್ನೂರು ಆಸನಗಳ ಮೇಲೆ ಆಸ್ಥಾನ ಪಂಡಿತರು ಕುಳಿತಿದ್ದರು. ಹಾಗೂ ಇನ್ನುಳಿದ ಮುನ್ನೂರರ ಮೇಲೆ ವೇತಾಳದವರು. ಆ ವೇತಾಳದವರು ತಮ್ಮ ರೌಳಿಯ ಬಲದಿಂದ ರಾಜನಿಗೆ ರಾಜ್ಯಕಾರ್ಯದಲ್ಲಿ ಸಹಾಯ ಮಾಡುತ್ತಿದ್ದರು.

ರಾಜನ ಒಂದು ಶಬ್ದದಿಂದ ಸಾವಿರಾರು ದೊಡ್ಡ ದೊಡ್ಡ ಪಕ್ಷಿಗಳು ಪ್ರಚಾರ ಕಾರ್ಯವನ್ನು ಮಾಡುತ್ತಿದ್ದವು. ಹಾಗೂ ಆ ಆರುನೂರು ಕೂಡು ಮಣೆಗಳ ಮೇಲೆ ಕುಳಿತ ಜನರ ಮೇಲೆ ತಮ್ಮ ನೆರಳು ಹರಹುತ್ತಿದ್ದವು. ಅವನ ಆಪ್ಪಣೆಯಂತೆಯೇ ಪ್ರತಿದಿವಸ ಮುಂಜಾನೆ ಹಾಗೂ ಸಂಜೆಗೆ ಒಂದು ಪ್ರತಾಪಯುಕ್ತವಾದ ವಾಯುವು ಸುಳಿಯುತ್ತಿದ್ದಿತು. ಅದು ಇಡಿಗೆ ಇಡಿಯ ಮಂದಿರವನ್ನೂ ನಿಮಿಷದಲ್ಲಿ ಅದೆಷ್ಟು ದೂರ ತೆಗೆದುಕೊಂಡು ಹೋಗುತ್ತಿದ್ದಿತೆಂದರೆ ಅಲ್ಲಿಗೆ ಹಾಗೇ ತಲಪುವುದಕ್ಕೆ ಒಂದು ತಿಂಗಳು ಹಿಡಿಯುತ್ತದೆ. ಈ ಪ್ರಕಾರ ರಾಜನು ತನ್ನ ರಾಜ್ಯಕ್ಕೆ ಒಳಪಟ್ಟ ದೂರದೇಶಗಳನ್ನು ಆಳುತ್ತಿದ್ದನು. ಇವರ ಹೊರತಾಗಿ ಸುಲೇಮಾನನು ಒಂದು ಅದೆಂಥ ಚಮತ್ಕಾರಿಕವಾದ ಸಿಂಹಾಸನವನ್ನು ರಚಿಸಿಕೊಂಡಿದ್ದನೆಂದರೆ—ಅದು ಯಾರ ಕಲ್ಪನೆಯಲ್ಲಿಯೂ ಬರಲಿಕ್ಕೆ ಶಕ್ಯವಿಲ್ಲ. ಆ ಸಿಂಹಾಸನವನ್ನು ಹೇಗೆ ರಚಿಸಿಕೊಂಡಿದ್ದನೆಂದರೆ—ರಾಜನು ಅದರ ಮೇಲೆ ಕುಳಿತುಕೊಂಡಾಗ ಅವನ ಮುಂದೆ ಯಾವ ವ್ಯಕ್ತಿಯೂ ಸುಳ್ಳು ಹೇಳುವ ಸಾಹಸ ಮಾಡಿದ್ದು ಕಂಡಿಲ್ಲ.

ಅದು ಆನೆಯ ಹಲ್ಲಿನದು. ಅದರಲ್ಲಿ ಮುತ್ತು, ಪಚ್ಚೆ, ಮಾಣಿಕ ಗಳನ್ನು ಕೆಚ್ಚಿದ್ದರು. ಅದರ ನಾಲ್ಕೂ ಮಗ್ಗಲು ನಾಲ್ಕು ಬಂಗಾರದಿಂದ ಮಾಡಿದ ಖಜ್ಜೂರಿಯ ಗಿಡಗಳಿದ್ದವು. ಅವುಗಳ ಮೇಲೆಯೂ ಪಚ್ಚೆಮಾಣಿಕ ಗಳ ಹಣ್ಣುಗಳನ್ನು ಬೆಸೆದಿದ್ದರು. ಆ ಕಜ್ಜೂರಿಯ ಗಿಡಗಳೊಳಗಿನ ಎರಡು ತುದಿಗಳ ಮೇಲೆ ಬಂಗಾರದ ಎರಡು ನವಿಲುಗಳು ಕುಳಿತಿದ್ದವು. ಹಾಗೂ ಎರಡರ ಮೇಲೆ ಬಂಗಾರದ ಎರಡು ರಣಹದ್ದುಗಳು; ಸಿಂಹಾಸನದ ಎರಡೂ ಮಗ್ಗಲು ಎರಡು ಪಚ್ಚ ಕಂಬಗಳ ನಡುವೆ ಎರಡು ಬಂಗಾರದ ಸಿಂಹಗಳು ನಿಂತುಕೊಂಡಿದ್ದವು. ಕಜ್ಜೂರಿಯ ಬೊಡ್ಡಿಯ ಸುತ್ತಲೂ ಬಂಗಾರದ ಒಂದು ದ್ರಾಕ್ಷಿಯ ಬಳ್ಳಿ ಹಬ್ಬಿತ್ತು. ಅದಕ್ಕೆ ಮಾಣಿಕದ ದ್ರಾಕ್ಷೆಗಳನ್ನು ಅಂಟಿಸಲಾಗಿತ್ತು.

ಇಜರಾಯಿಲದ ದೊಡ್ಡ ದೊಡ್ಡ ಜನರು ಸುಲೇಮಾನನ ಎಡಗಡೆಯಲ್ಲಿ ಕುಳ್ಳಿರುತ್ತಿದ್ದರು. ಹಾಗೂ ಅವರ ಕೂಡುಮಣೆಗಳು ಬಂಗಾರದವಿದ್ದವು. ವೇತಾಳದವರ ಸ್ಥಾನವು ರಾಜನ ಬಲಗಡೆಯಲ್ಲಿ. ಅವರು ಕೂಡುವ ಮಣಿ ಗಳು ಬೆಳ್ಳಿಯವಿದ್ದವು.

ರಾಜನು ತನ್ನ ನ್ಯಾಯ ವ್ಯವಹಾರವನ್ನು ಮಾಡುತ್ತಿರುವಾಗ ಯಾರು ಬೇಕಾದವರು ಅವನ ಬಳಿಯಲ್ಲಿ ಬರಬಲ್ಲರಾಗಿದ್ದರು. ಆಗ ಯಾವನಾದರೂ ಮನುಷ್ಯನು ಇನ್ನೊಬ್ಬನ ಸಾಕ್ಷ್ಯವನ್ನು ಹೇಳುವನು. ಹಾಗೂ ಅವನು ಸತ್ಯದಿಂದ ಸ್ವಲ್ಪವೇ ಸರಿದಾಡಿದರೂ ಒಂದು ಆಶ್ಚರ್ಯಜನಕವಾದ ಘಟನೆಯು ಒದಗಿಬಿಡುವದು. ಅವನ ಎದುರಿಗೇ ಸಿಂಹಾಸನ, ಸಿಂಹ, ಕಜ್ಜೂರಿಯ ಗಿಡ, ನವಿಲು ಹಾಗೂ ರಣಹದ್ದು ಇವೆಲ್ಲ ಒಮ್ಮೆಲೇ ಹೊರಳಿಬಿಡುವವು. ಸಿಂಹವು ತನ್ನ ಪಂಜರವನ್ನು ಮುಂದುಗಡೆ ಒಗೆಯುವದು. ಹಾಗೂ ಬಾಲ ವನ್ನು ನೆಲಕ್ಕೆ ಅಪ್ಪಳಿಸಹತ್ತುವದು. ನವಿಲು ಹಾಗೂ ರಣಹದ್ದುಗಳು ಅವನ ಮೇಲೆ ಎರಗಿ ಕುಕ್ಕತೊಡಗುವವು.

ಇದರಿಂದ ಸಾಕ್ಷಿದಾರನು ಭಯದಿಂದ ನಡುಗುವನು. ಸುಳ್ಳುಹೇಳುವ ಸಾಹಸವನ್ನು ಸ್ವಲ್ಪವೂ ಮಾಡಲಾರನು.

ನಿಸ್ಸಂದೇಹವಾಗಿ ಇದೆಲ್ಲ ರಾಜನ ಸಲುವಾಗಿ ಬಲು ಭಯಪ್ರದವಾಗಿತ್ತು. ಹಾಗೂ ಇದರಿಂದ ಅವನ ಕಾರ್ಯವು ಅತಿ ಸುಗಮವಾಗಿ ಜರುಗುತ್ತಿತ್ತು. ಆದರೆ ಭಯವೇನೋ ಯಾವಾಗಲೂ ಒಂದು ದುಃಖಕರ ಪಾಪ ವಸ್ತುವಾಗಿರುತ್ತದೆ. ಅದು ಸತ್ಯದೊಡನೆ ಸರಿಯಾಗಿ ಮೇಳವಿಸುವದಿಲ್ಲ.

ಬಾಬು ಅಬ್ಬಾಸನ ಕಥೆಗನುಸಾರವಾಗಿ ಭಯವು ಒಮ್ಮೊಮ್ಮೆ ಸತ್ಯವನ್ನು ಹೇಳುವುದಕ್ಕೆ ಮನುಷ್ಯನನ್ನು ಪ್ರವೃತ್ತಿಸುತ್ತಿದ್ದರೂ ಅವನನ್ನು ಸತ್ಯವಾದಿಯನ್ನಾಗಿ ಮಾಡಲಾರದು. ಯಾಕಂದರೆ ಅದು ಅವನನ್ನು ಕೆಲವೊಂದು ಸಮಯದ ತರುವಾಯ ಅಸತ್ಯ ಹೇಳುವುದಕ್ಕೂ ಪ್ರವೃತ್ತಗೊಳಿಸಬಹುದು. ನಮ್ಮ ಮೊದಲಿನ ಕಥೆಯಲ್ಲಿ ಸರಿಯು ನಡೆಸಿದ ವ್ಯವಹಾರದಂತೆ ಪ್ರಾಯಃಶಃ ಆಗುತ್ತದೆ.

ಸತ್ಯ ಮಾತಾಡುವುದನ್ನು ಕಲಿಯುವ ಸಲುವಾಗಿ ಒಬ್ಬ ಸತ್ಯ ಮನುಷ್ಯನಿಗೆ ಸುಲೇಮಾನನ ಸಿಂಹಾಸನದ ಚಮತ್ಕಾರದ ಅವಶ್ಯಕತೆಯಿಲ್ಲ ಸತ್ಯದ ಸಿಂಹಾಸನವು ಅವರಿಗೆ ಸತ್ಯ ಮಾತನಾಡುವ ಸಲುವಾಗಿ ಪ್ರೇರಿತಗೊಳಿಸಬಲ್ಲದು. ಅವರಿಗೆ ಯಾವ ಶಿಕ್ಷಕನದಾಗಲಿ, ಸ್ವಾಮಿಯದಾಗಲಿ, ನ್ಯಾಯಾಧೀಶನದಾಗಲಿ ಅಂಜಿಕೆಯಿದೆಯೆಂಬ ಕಾರಣದಿಂದ ಅವರು ಸತ್ಯ ಮಾತಾಡುವದಿಲ್ಲ. ಇದೊಂದೇ ಸತ್ಯವು ಮನುಷ್ಯನಿಗೆ ಉಚಿತವಾಗಿದೆ. ಅದೊಂದು ಅವರ ಸ್ವಭಾವದ ಒಂದು ಅಂಗವಾಗಿದೆಯೆಂಬ ಕಾರಣದಿಂದ ಅವರು ಸತ್ಯ ಮಾತಾಡುತ್ತಾರೆ. ಸರ್ವಭಯಗಳಿಂದ ಅವನನ್ನು ನಿರ್ಭಯನನ್ನಾಗಿ ಮಾಡುವುದು ಸತ್ಯಪ್ರೇಮವೊಂದೇ ಸರಿ. ಅದರ ಸಲುವಾಗಿ ಭವಿಷ್ಯದಲ್ಲಿ ಅದೆಂಥ ಗಂಡಾಂತರ ಬಂದೊದಗಲಿ, ಅವನು ಮಾತಾಡಬೇಕಾಗಿರುವದನ್ನೇ ಮಾತಾಡುತ್ತಾನೆ.

ವಿಶ್ವಾಮಿತ್ರ ಎಂಬ ಹೆಸರಿನ ಒಬ್ಬ ಧನವಂತನೂ, ಶಕ್ತಿಶಾಲಿಯೂ ಆದ ರಾಜನು ವಿಶೇಷ ಪ್ರತಿಷ್ಠೆಯನ್ನು ಪಡೆಯಬೇಕೆಂದು ತಪಸ್ಸು ಮಾಡುವುದಕ್ಕೆ ನಿಶ್ಚಯಿಸಿದನು. ಅವನು ತನ್ನ ಕ್ಷತ್ರಿಯ ಜಾತಿಯಿಂದ ಸರ್ವೋಚ್ಚವಾದ ಬ್ರಾಹ್ಮಣ ಜಾತಿಯಲ್ಲಿ ಪ್ರವೇಶಿಸಬೇಕೆಂದು ಇಚ್ಛಿಸುತ್ತಿದ್ದನು. ಅದರ ಸಲುವಾಗಿ ಅವನು ಆವಶ್ಯಕವೆಂದು ತಿಳಿದ ಎಲ್ಲವನ್ನೂ ಮಾಡಿದನಲ್ಲದೆ ಎಲ್ಲರ ಬಾಯಿಯಲ್ಲಿಯೂ ರಾಜನು ಬ್ರಾಹ್ಮಣನಾಗಲಿಕ್ಕೆ ತುಂಬ ಯೋಗ್ಯನು ಎಂಬ ಮಾತೇ ನಲಿಯುವಂತೆ ಅವನು ಕಠೋರವಾದ ತಪಸ್ಸಿನ ಜೀವನವನ್ನು ಅನುಸರಿಸತೊಡಗಿದನು.

ಆದರೆ ಬ್ರಾಹ್ಮಣರಾದ ವಶಿಷ್ಠರು ಹಾಗೆ ತಿಳಿಯುತ್ತಿದ್ದಿಲ್ಲ. ಯಾಕೆಂದರೆ ವಿಶ್ವಾಮಿತ್ರನು ಅಭಿಮಾನವಶನಾಗಿ ಈ ಕಾರ್ಯವನ್ನು ಮಾಡುತ್ತಿದ್ದಾನೆಂದೂ ಅವನ ತ್ಯಾಗವು ನಿಜವಾದ ತ್ಯಾಗವಲ್ಲವೆಂದೂ ಅವರು ತಿಳಿಯುತ್ತಿದ್ದರು. ಆ ಕಾರಣದಿಂದ ಅವನನ್ನು ಬ್ರಾಹ್ಮಣನೆಂದು ಮನ್ನಿಸಿ ಪ್ರಣಾಮ ಮಾಡುವುದನ್ನು ವಶಿಷ್ಠರು ನಿರಾಕರಿಸಿದರು.

ರಾಜನು ಕ್ರೋಧವಶನಾಗಿ ವಶಿಷ್ಠರ ಕುಟುಂಬದ ಒಂದು ನೂರು ಬಾಲಕರನ್ನು ಕೊಲೆಹೊಡೆದನು. ಇಷ್ಟೊಂದು ದುಃಖಶೋಕವಾದ ಮೇಲೆ ಸಹ ಅವರು ನಮ್ಮ ವಿಚಾರದಲ್ಲಿ ಸತ್ಯವಿಲ್ಲದ್ದನ್ನು ಎಂದೂ ನುಡಿಯುವದಿಲ್ಲವೆಂಬ ಮಾತನ್ನೇ ಗಟ್ಟಿಹಿಡಿದರು.

ಆಗ ರಾಜನು ಆ ಸತ್ಯವಾದಿ ಮನುಷ್ಯನನ್ನು ಸಹ ಕೊಂದುಹಾಕುವ ನಿಶ್ಚಯ ಮಾಡಿದನು. ಒಂದು ದಿನ ಸಾಯಂಕಾಲಕ್ಕೆ ಅವನು ಆ ದುಷ್ಕಾರ್ಯವನ್ನು ಮಾಡುವ ಸಲುವಾಗಿ ವಶಿಷ್ಠರ ಗುಡಿಸಲಿನ ಕಡೆಗೆ ನಡೆದನು.

ಬಾಗಿಲವರೆಗೆ ಬಂದಬಳಿಕ, ವಶಿಷ್ಠರು ಒಳಗೆ ಯಾರೋ ಮಿತ್ರರೊಡನೆ ಮಾತನಾಡುತ್ತಿರುವುದನ್ನು ಅವನು ಕೇಳಿದನು. ಅವನ ಕಿವಿಯಲ್ಲಿ ತನ್ನ

ಹೆಸರೇ ಬೀಳಲು ಅದನ್ನು ಕೇಳಿ ಅವನು ಅಲ್ಲಿಯೇ ಬೆಚ್ಚಿಬಿದ್ದನು. ಯಾವ ಮಾತು ಅವನು ಕೇಳಿದನೋ ಅದು ಶುದ್ಧವೂ ಪವಿತ್ರವೂ ಆಗಿರುವುದರ ಜೊತೆಗೆ ಕ್ಷಮಾಪೂರ್ಣವೂ ಆಗಿತ್ತು. ಪಶ್ಚಾತ್ತಾಪದಿಂದ ತುಂಬಿ ಅವನು ಒಳಗೆ ಹೋಗಿ ಋಷಿಗಳ ಚರಣಗಳಲ್ಲಿ ಎರಗಿದನು.

ರಾಜನ ಇಂಥ ಮಾನಸಿಕ ಅವಸ್ಥೆಯನ್ನು ನೋಡಿ ವಶಿಷ್ಠರು ಅವನನ್ನು ಪ್ರೇಮಪೂರ್ವಕವಾಗಿ ಸ್ವಾಗತಿಸಿ— "ಬ್ರಹ್ಮರ್ಷಿ!" ಎಂದು ನುಡಿದರು. ರಾಜನು ವಿನಯಪೂರ್ವಕವಾಗಿ ಕೇಳಿದನು— "ಇದಕ್ಕೂ ಮೊದಲು ತಾವು ನನ್ನ ತಪಸ್ಸನ್ನು ಆದೇಕೆ ಆದರಿಸಲಿಲ್ಲ?"

"ಯಾಕಂದರೆ ಆಗ ನೀವು ನಿಮ್ಮ ಶಕ್ತಿಯ ಮದದಿಂದ ಬ್ರಾಹ್ಮಣ ಪದವನ್ನು ಬೇಡುತ್ತಿದ್ದಿರಿ. ಆದರೆ ಈಗ ನಿಮಗೆ ಪಶ್ಚಾತ್ತಾಪವಾಗತೊಡಗಿದೆ. ಹಾಗೂ ಆ ಕಾರಣದಿಂದ ನೀವು ಬ್ರಾಹ್ಮಣನ ನಿಜವಾದ ವೃತ್ತಿಯಲ್ಲಿ ಬಂದು ಬಿಟ್ಟಿರುವಿರಿ." ಎಂದು ವಶಿಷ್ಠರು ಉತ್ತರ ಕೊಟ್ಟರು.

ವಶಿಷ್ಠರು ನಿರ್ಭಯತಾಪೂರ್ವಕವಾಗಿ ಹಾಗೂ ಯಾವ ಪ್ರತಿಶೋಧದ ಭಾವನೆಯಿಲ್ಲದೆ ಸತ್ಯ ಮಾತಾಡುವುದನ್ನು ತಿಳಿದಿದ್ದರು.

*    *    *    *

"ಈ ಪ್ರಕಾರ ಸತ್ಯ ಮಾತಾಡುವುದು ಅದೆಷ್ಟು ಸುಂದರವಾಗಿದೆ. ಹಾಗೆ ಮಾಡುವುದರಲ್ಲಿ ವಿಪತ್ತುಗಳು ಉಂಟಾಗಲೊಲ್ಲವೇಕೆ." ಎಂದು ನಿಮಗೆ ಅನಿಸುವದಿಲ್ಲವೇ?

ಮತ್ತು ಪ್ರಾಯಶಃ ಹೀಗೆ ನೋಡಬಹುದು—

ಯಾರು ಈ ಪ್ರಕಾರದ ವಿಪತ್ತುಗಳನ್ನು ಎದುರಿಸುವರೋ ಅವರಿಗೆ ಕೊನೆಯಲ್ಲಿ ಎಲ್ಲ ಸಂಗತಿಗಳು ಒಳ್ಳೆಯವಾಗಿ ಬಿಡುತ್ತವೆ. ಆರಂಭದಲ್ಲಿ

ಅವರಿಗೆ ಹಾಗೆ ಅನಿಸದಿರಲೊಲ್ಲದೇಕೆ. ಅಸತ್ಯದ ಸಫಲತೆಯು ಯಾವಾಗಲೂ ಅಸ್ಥಾಯಿಯಾಗಿರುತ್ತದೆ. ಆದರೆ ಅಧಿಕತರವಾಗಿ ಸತ್ಯ ಮಾತಾಡುವುದೇ ಚತುರನಾಗುವ ಎಲ್ಲಕ್ಕೂ ಹಿರಿಯ ಪದ್ಧತಿಯಾಗಿದೆ.

ಒಂದು ದಿವಸ ಮುಂಜಾನೆಯ ಹೊತ್ತಿನಲ್ಲಿ ದಿಲ್ಲಿಯ ಬಾದಶಹನು ಯೋಗ್ಯ ವ್ಯಕ್ತಿಗಳಿಗೆ ಬಿರುದು ಬಿಲ್ಲೆಗಳನ್ನು ಹಂಚಬೇಕೆಂದು ಸಿಂಹಾಸನದ ಮೇಲೆ ಕುಳಿತಿದ್ದನು. ಉತ್ಸವವು ಮುಗಿಯುವ ಹೊತ್ತಿಗೆ ಅವನು ಜರಮಾಡಿ ಕೊಂಡಿದ್ದ ವ್ಯಕ್ತಿಗಳಲ್ಲಿ ಸೈಯದ ಅಹಮ್ಮದನೆಂಬ ಹೆಸರಿನ ಒಬ್ಬ ಯುವಕನು ಈ ವರೆಗೂ ಬಂದಿಲ್ಲವೆಂಬುದನ್ನು ನೋಡಿದನು.

ಬಾದಶಹನು ಪಲ್ಲಕ್ಕಿಯನ್ನು ಹತ್ತುವದಕ್ಕಾಗಿ ಸಿಂಹಾಸನದಿಂದ ಇಳಿದಿದ್ದನು. ಆದರಲ್ಲಿ ಕುಳಿತುಕೊಂಡು ಅವನು ತನ್ನ ವಿಶಾಲಮಂದಿರದ ಒಂದು ಭಾಗದಿಂದ ಇನ್ನೊಂದು ಭಾಗಕ್ಕೆ ಹೊರಟಿದ್ದನು.

ಅದೇ ಹೊತ್ತಿಗೆ ಸರಿಯಾಗಿ ಆ ಯುವಕನು ಅವಸರದಿಂದ ಪ್ರವೇಶಿಸಿದನು.

“ ನಿಮ್ಮ ಮಗನು ತಡಮಾಡಿ ಬಂದನು ” ಎಂದು ಬಾದಶಹನು ತನ್ನ ಮಿತ್ರನಾದ ಸೈಯದನ ತಂದೆಗೆ ಹೇಳಿದನು. ಹಾಗೂ ಸ್ವಯಂ ಯುವಕನ ಕಡೆಗೆ ಕಿಡಿಗಣ್ಣಿನಿಂದ ನೋಡಿ— “ ಈ ವಿಲಂಬ ಏಕಾಯಿತು ? ” ಎಂದು ಕೇಳಿದನು.

“ ಬಾದಶಹರೇ ಒಳ್ಳಿತು ” ಎಂದು ಸೈಯದನು ಸತ್ಯವಂತಿಕೆಯಿಂದ ನುಡಿದನು— “ ನಾನು ಈ ಹೊತ್ತು ಬಹಳ ಹೊತ್ತಿನ ವರೆಗೆ ಮಲಗಿಕೊಂಡಿದ್ದೆನು. ”

ಅಸ್ಥಾನಿಗರೆಲ್ಲರೂ ಸ್ತಂಭಿತರಾಗಿ ಆ ಯುವಕನ ಕಡೆಗೆ ನೋಡಹತ್ತಿದರು. ಅದೆಂಥ ದಿಟ್ಟತನದಿಂದ ಬಾದಶಹನ ಮುಂದೆ ಮಾತನಾಡು

ತ್ರಿದ್ದಾನೆ ! ಇದಂತೂ ಯೋಗ್ಯವಾದ ಸೇವವೇ ಅಲ್ಲ. ಹೀಗೆ ಮಾತಾಡುವುದ ರಿಂದ ಅವನಿಗೆ ತಿಳಿಯದಂತೆ ಯಾವ ಗಂಡಾಂತರವುಂಟಾಗುವುದೋ !

ಆದರೆ ಆದದ್ದು ಇದಕ್ಕೆ ವಿಪರೀತವಾಗಿ. ಬಾದಶಹನು ಒಂದು ಕ್ಷಣ ಯೋಚಿಸಿ ಬಳಿಕ ಆತನು ಯುವಕನ ಸತ್ಯವಾದಿತ್ವದ ಸಲುವಾಗಿ ಪ್ರಶಂಸೆ ಮಾಡಿದನು. ಹಾಗೂ ಆತನ ಸಾಹಸದ ಸಲುವಾಗಿ ಅವನಿಗೆ ಮುತ್ತಿನ ಮಾಲೆಯನ್ನೂ ಕೊಟ್ಟನು.

ಈ ಪ್ರಕಾರ ಸತ್ಯವನ್ನು ಪ್ರೇಮಿಸುತ್ತಿದ್ದ ಹಾಗೂ ಬಾದಶಹನಿಂದ ಒಕ್ಕಲಿಗನವರೆಗೆ ಎಲ್ಲರ ಕೂಡ ಸತ್ಯ ಮಾತಾಡುತ್ತಿದ್ದ ಸೈಯದ ಅಹಮ್ಮದ ನಿಗೆ ಈ ಪ್ರತಿಫಲವು ಸಿಕ್ಕಿತು.

ಯಾವ ಕಷ್ಟವೂ ಇಲ್ಲದೆ ಸತ್ಯ ಮಾತಾಡುವುದಕ್ಕೆ ಶಕ್ಯವಾಗುವ ಸಲು ವಾಗಿ ಎಲ್ಲಕ್ಕೂ ಒಳ್ಳೆಯ ದಾರಿ ಯಾವುದೆಂದರೆ— ನಮ್ಮ ಯಾವ ಕಾರ್ಯ ವನ್ನೂ ನಾವು ಬಯತಿಡುವ ಕಾರಣವಿಲ್ಲದ ಕರ್ಮಗಳನ್ನು ನಾವು ಯಾವಾ ಗಲೂ ಮಾಡುತ್ತಿರಬೇಕು. ಆ ಕಾರಣ ಪ್ರತಿಕ್ಷಣವೂ ನಾವು ಪರಮಾತ್ಮನ ಎದುರಿಗಿದ್ದೇವೆಂಬುದನ್ನು ನೆನಪಿಡಬೇಕು. ಯಾಕಂದರೆ ಮಾತಿನ ಸತ್ಯತೆಯು ಕಾರ್ಯದ ಸತ್ಯತೆಯನ್ನು ಬೇಡುತ್ತದೆ. ತನ್ನ ವಚನ ಹಾಗೂ ಕರ್ಮಗಳಿಂದ ಸರ್ವ ಬೂಟಾಟಿಕೆಗಳನ್ನು ಓಡಿಸಿಬಿಡುವವನೇ ಸತ್ಯ ಮನುಷ್ಯನು.

ಅಮರೋಹೆ ನಗರದಲ್ಲಿ ಒಂದು ವಿಶೇಷ ಪ್ರಕಾರದ ಪಾತ್ರೆಗಳು ಸಿದ್ಧ ವಾಗುತ್ತವೆ. ಅವುಗಳಿಗೆ ' ಕಾಗಜೀ ' ಎನ್ನುತ್ತಾರೆ. ಅವುಗಳ ಮೇಲೆ ಬೆಳ್ಳಿ ಕೆತ್ತಿರುವ ಕೆಲಸದ ಅಲಂಕಾರವಿರುತ್ತದೆ. ಪಾತ್ರೆಗಳಂತೂ ಬಹು ಸುಂದರ ವಾಗಿರುತ್ತವೆ. ಆದರೆ ಅವು ಎಷ್ಟೊಂದು ಹಗುರು ಹಾಗೂ ಪೊಳ್ಳು ಇರುತ್ತ ವೆಂದರೆ— ಒಂದಿಷ್ಟೇ ಉಪಯೋಗಿಸಿದರೂ ತಟ್ಟನೆ ಒಡೆದು ಹೋಗುತ್ತವೆ. ಆದರೂ ನೋಡುವುದಕ್ಕೆ ಅವು ಬಲು ಉಪಯುಕ್ತವೆಂದು ತೋರುತ್ತವೆ. ಆದರೆ ಅವುಗಳನ್ನು ನೋಡಿಯೇ ಮನಸ್ಸನ್ನು ಸಂತೋಷಪಡಿಸಬೇಕು.

ಅದೆಷ್ಟೋ ಜನರು ಆ 'ಕಾಗಜೀ' ಪಾತ್ರೆಗಳಂತೆ ಇರುತ್ತಾರೆ. ಅವರ ಸ್ವರೂಪವು ಸುಂದರವಿರುತ್ತದೆ. ಆದರೆ ನೀವು ಅವರನ್ನು ಯಾವುದಾದರೂ ವಿಷಯದಲ್ಲಿ ಒರೆಗಲ್ಲಿಗೆ ತಿಕ್ಕುವ ಪ್ರಯತ್ನ ಮಾಡಿದರೆ ಅವರೊಳಗೆ ತೋರಿಕೆಯ ಹೊರತಾಗಿ ಇನ್ನೇನೂ ಇಲ್ಲವೆಂಬುದು ನಿಮಗೆ ಬೋಧವಾಗುವದು. ಅವರ ಮೇಲೆ ಎಳ್ಳಷ್ಟೂ ಭರವಸೆ ಇಡಬಾರದು. ಯಾಕಂದರೆ ದುರ್ಬಲತೆಯ ಕಾರಣದಿಂದ ಅವರು ಬಹು ದೊಡ್ಡ ಭಾರವಾಗಿರುತ್ತಾರೆ.

ಒಬ್ಬ ಬ್ರಾಹ್ಮಣನು ಒಮ್ಮೆ ತನ್ನ ಮಗನನ್ನು ಯಾವ ಪಂಡಿತನಿಂದಾದರೂ ವಿದ್ಯೆ ಕಲಿತು ಬರಲೆಂದು ಆಲ್ಲಿಗೆ ಕಳಿಸಿದನು.

ಹನ್ನೆರಡು ವರುಷಗಳಾದ ಮೇಲೆ ಆ ಯುವಕನು ತನ್ನ ನಗರಕ್ಕೆ ಮರಳಿ ಬಂದನು. ಈಗ ಇವನು ಮಹಾ ವಿದ್ವಾನ ಪಂಡಿತನಾಗಿಬಿಟ್ಟಿದ್ದಾನೆಂದು ಅದೆಷ್ಟೋ ಜನರು ತಿಳಕೊಂಡರು. ಅವನನ್ನು ಕಾಣಬೇಕೆಂದು ಓಡಿಯೋಡಿ ಅವನ ಮನೆಗೆ ಬಂದರು. ಅವರು ಅವನೆದುರಿಗೆ ಸಂಸ್ಕೃತ ಭಾಷೆಯ ಒಂದು ಪುಸ್ತಕವನ್ನಿಟ್ಟು— "ಪೂಜ್ಯ ಪಂಡಿತರೇ, ಇದರಲ್ಲಿರುವ ಜ್ಞಾನವನ್ನು ನಮಗೆ ಹೇಳಿಕೊಡಿರಿ" ಎಂದು ನುಡಿದರು.

ಯುವಕನು ಸ್ಥಿರದೃಷ್ಟಿಯಿಂದ ಆ ಪುಸ್ತಕದ ಕಡೆಗೆ ನೋಡಹತ್ತಿದನು. ನಿಜವಾಗಿ ಅವನಿಗೆ ಅದರೊಳಗಿನ ಒಂದು ಶಬ್ದ ಸಹ ತಿಳಿಯಲಿಲ್ಲ. ಕಾಶಿಯಲ್ಲಿ ಅವನು ಅಕ್ಷರಜ್ಞಾನದ ಹೊರತು ಇನ್ನೇನೂ ಕಲಿತಿರಲಿಲ್ಲ. ಆ ಅಕ್ಷರಗಳು ಸಹ ಅವನ ಮೆದುಳಿನಲ್ಲಿ ಮೆಲ್ಲಮೆಲ್ಲನೆ ಏತಕ್ಕಾಗಿ ಪ್ರವೇಶಿಸಿದ್ದವೆಂದರೆ— ಅಲ್ಲಿ ಅವು ತುಂಬ ದೊಡ್ಡ ದೊಡ್ಡ ಆಕಾರದಲ್ಲಿ ಕರೆ ಹಲಗೆಯ ಮೇಲೆ ಬರೆದಿಡಲ್ಪಡುತ್ತಿದ್ದವು. ಹಾಗೂ ಅವನು ಅವುಗಳನ್ನು ಪ್ರತಿದಿನ ನೋಡುತ್ತಿದ್ದನು.

ಅವನು ಪುಸ್ತಕದ ಮುಂದೆ ಗಪ್ಪುಗಡದಾಗಿ ಕುಳಿತುಬಿಟ್ಟನು. ಇನ್ನು ಅವನ ಕಣ್ಣುಗಳಿಂದ ನೀರು ಸುರಿಯಲಿವೆಯೆಂದು ತೋರಹತ್ತಿತು.

ಬಂದವರು ಕೇಳಿದರು— “ ಪಂಡಿತರೇ, ನಿಜವಾಗಿ ಈ ಪುಸ್ತಕದ ಯಾವದೋ ವಿಷಯವು ತಮ್ಮ ಹೃದಯವನ್ನು ಇಷ್ಟೊಂದು ದ್ರವಿತಗೊಳಿಸಿದೆ. ಏನಿದೆಯೋ ಅದನ್ನು ನಮಗೂ ಹೇಳಿಕೊಡಿರಿ. ”

“ ಈ ಅಕ್ಷರಗಳು ಕಾಶಿಯಲ್ಲಿ ದೊಡ್ಡವಾಗಿದ್ದವು. ಆದರೆ ಇಲ್ಲಿ ಅವು ಚಿಕ್ಕವಾಗಿವೆ. ” ಎಂದು ಅವನು ಕೊನೆಯಲ್ಲಿ ಹೇಳಿದನು.

ಆ ಪಂಡಿತನು ಆ ‘ ಕಾಗಜೀ’ ಪಾತ್ರೆಗಳಂತೆ ಇದ್ದಿರಲಿಲ್ಲವೇ ?

* * * *

ಒಂದು ತೋಳ ಗಂಗಾನದಿಯ ತೀರದ ಒಂದು ಬಂಡೆಗಲ್ಲಿನ ಮೇಲೆ ಇರುತ್ತಿತ್ತು. ಪರ್ವತದ ಮೇಲೆ ಹಿಮ ಕರಗಿದ್ದರಿಂದ ನದಿಗೆ ಮಹಾಪೂರ ಬಂದಿತು. ಒಂದು ದಿನ ನೀರು ಅದೆಷ್ಟು ಎತ್ತರಕ್ಕೆ ಏರಿತೆಂದರೆ — ಅದು ಆ ಬಂಡೆಗಲ್ಲಿನ ನಾಲ್ಕೂ ನಿಟ್ಟಿನಲ್ಲಿ ಸುತ್ತುವರಿಯಿತು. ಆ ದಿವಸ ತೋಳನು ತನ್ನ ಊಟವನ್ನು ಹುಡುಕಲಿಕ್ಕೆ ಹೋಗುವುದು ಅಶಕ್ಯವಾಯಿತು. ಅಂದಿನೂಟಕ್ಕೆ ತನ್ನ ಬಳಿಯಲ್ಲಿ ಏನೂ ಇಲ್ಲದ್ದನ್ನು ಕಂಡು ಅದು ಅಂದುಕೊಂಡಿದ್ದೇನಂದರೆ— “ ಒಳ್ಳೆಯದೇ ಆಯಿತು. ಇಂದು ಪವಿತ್ರ ದಿನವೂ ಅದೆ. ಅದನ್ನು ಲಕ್ಷ್ಯದಲ್ಲಿರಿಸಿ ನಾನಿಂದು ವ್ರತ ಮಾಡುವೆನು. ”

ಅದು ಬಂಡೆಗಲ್ಲಿನ ಒಂದು ಮೂಲೆಯಲ್ಲಿ ಕುಳಿತುಬಿಟ್ಟಿತು. ಹಾಗೂ ವ್ರತದ ಪವಿತ್ರ ದಿನವನ್ನು ಆಚರಿಸುವ ಸಲುವಾಗಿ ಅದು ತನ್ನ ಆಕೃತಿಯನ್ನು ತುಂಬ ಗಂಭೀರವನ್ನಾಗಿ ಮಾಡಿಕೊಂಡಿತು.

ಆದರೆ ಅದೇ ಸಮಯಕ್ಕೆ ಏನಾಯಿತೆಂದರೆ— ಒಂದು ಅಡವಿಯ ಆಡು ನೀರಿನ ಮೇಲಿನಿಂದ, ಒಂದು ಬಂಡೆಗಲ್ಲಿನಿಂದ ಇನ್ನೊಂದರ ಮೇಲೆ ಜಿಗಿಯುತ್ತ ಆ ಸ್ಥಳಕ್ಕೆ ಬಂದು ತಲಪಿತು. ಅಲ್ಲಿ ತೋಳ ತುಂಬ ಭಕ್ತಿಭಾವದಲ್ಲಿ ಕುಳಿತಿತ್ತು.

ಆವನ್ನು ನೋಡಿದ ಕೂಡಲೇ ತೋಳ ಒಮ್ಮೆಲೇ ಕಿರಚತೊಡಗಿತು— "ಓಹೋ! ಇದು ಇರಲಿ ತುಸು ತಿನ್ನಲಿಕ್ಕೆ."

ಅದು ಆಡಿನ ಮೇಲೆ ಹಾರಿಬಿದ್ದಿತು. ಆದರೆ ಗುರಿ ತಪ್ಪಿಹೋಯಿತು. ಮತ್ತೊಂದು ಸಾರೆ ಹಾರಿ ಬಿದ್ದಿತು. ಆ ಸಾರೆಯೂ ತಪ್ಪಿಕೊಂಡಿತು. ಕೊನೆಯಲ್ಲಿ ಆಡು ವೇಗವಾಗಿ ಹರಿಯುತ್ತಿರುವ ಪ್ರವಾಹವನ್ನು ದಾಟಿ ಸಂಪೂರ್ಣವಾಗಿ ತೋಳನ ಆಳವಿನಿಂದ ದೂರ ಹೋಗಿ ಬಿಟ್ಟಿತು.

"ಬಹಳ ಒಳ್ಳೆಯದು" ಎಂದು ತೋಳ ತನ್ನ ಸಾಧುಭಾವವನ್ನು ಪುನಃ ಧಾರಣ ಮಾಡುತ್ತ "ನಾನು ಇಂದು ವ್ರತದ ಪವಿತ್ರ ದಿನದಲ್ಲಿ ಆಡಿನ ಮಾಂಸ ತಿಂದು ಅಪವಿತ್ರವಾಗಲಾರೆನು. ಛೀ! ಛೀ!! ಇಂದು ವ್ರತದ ದಿವಸ ಮಾಂಸ! ಎಂದಿಗೂ ಆಗದು."

ಆ ತೋಳ, ಅದರ ಭಕ್ತಿ ಹಾಗೂ ವ್ರತ, ಮತ್ತು ಅದರ ಶ್ರದ್ಧೆಯ ವಿಷಯದಲ್ಲಿ ನಿಮ್ಮ ಅಭಿಪ್ರಾಯವೇನು? ನೀವು ಅದರ ಕಪಟತನಕ್ಕೆ ನಗುತ್ತೀರಿ. ಆದರೆ ಅದೆಷ್ಟೋ ಜನರು ಹೀಗೆಯೇ ಇದ್ದಾರೆ. ಅವರ ಸತ್ಯವಂತಿಕೆ ತೋಳನ ಸತ್ಯವಂತಿಕೆಯಂತೆಯೇ ಇರುತ್ತದೆ. ಅವರು ಸುಂದರವಾದ ಭಾವನೆಗಳ ದೋಣಿಯನ್ನು ಓಡಿಸುತ್ತಾರೆ. ಯಾಕೆಂದರೆ ಅವರಲ್ಲಿ ಅವರ ಸ್ವಾರ್ಥವಿರುತ್ತದೆ. ಅವರು ಚಿಕ್ಕಪುಟ್ಟ ಭಕ್ತಿಭಾವದ ಕೆಲಸ ಮಾಡುತ್ತಾರೆ. ಯಾಕೆಂದರೆ ಅವರು ತಮ್ಮ ಕೆಟ್ಟ ಕೆಲಸಗಳನ್ನು ಪ್ರಕಟರೂಪದಲ್ಲಿ ಮಾಡುವುದಕ್ಕೆ ಸಿದ್ಧರಾಗಿರುವದಿಲ್ಲ. ಆದರೆ ಇದೆಲ್ಲ ಚತುರತೆಯಾಗಿದ್ದರೂ ಆ ಕಪಟತನವು ಸತ್ಯವಂತರೂ, ನ್ಯಾಯವಂತರೂ ಆದ ಜನರೆದುರಿಗೆ ಬಹಳ ದಿವಸಗಳವರೆಗೆ ತಾಳಲಾರವೆಂದು ನೀವು ಯೋಚಿಸಬಹುದು.

ಹನುಮಂತನ ಸೇನೆಯ ಕಪಿಗಳೂ ಕರಡಿಗಳೂ ರಾಮ ಹಾಗೂ ಆತನ ತಮ್ಮನಾದ ಲಕ್ಷ್ಮಣ ಇವರ ಸಲುವಾಗಿ ಹತ್ತು ತಲೆಯುವನಾದ ರಾವಣ

ರಕ್ಕಸನೊಡನೆ ಯುದ್ಧ ಮಾಡಿದರು. ಸೇನಾಸಮೂಹವು ನಾಲ್ಕೂ ನಿಟ್ಟಿನಿಂದ ಉಳಿದುಕೊಳ್ಳುವುದಕ್ಕೆ ತಮ್ಮ ಶಕ್ತಿ ಸಾಲದಿರುವುದನ್ನು ಕಂಡು ರಾವಣನು ತನ್ನ ಠೌಳಿಯ ಶಕ್ತಿಯನ್ನು ಉಪಯೋಗಿಸಿದನು.

ಒಮ್ಮೆಲೆ ಠೌಳಿಯ ಬಲದಿಂದ ಅವರ ಸುತ್ತಲು, ರಾಕ್ಷಸರ ನಡುವೆ ಬಹಳಷ್ಟು ರಾಮಲಕ್ಷ್ಮಣರು ಉತ್ಪನ್ನರಾಗಿಬಿಟ್ಟರು. ನಿಜವಾಗಿ ಅದು ಕೆಲವೊಂದು ಕಣ್ಕಟ್ಟೂ, ಮೋಡಿಯೂ ಆಗಿತ್ತು. ಆದರೆ ಕಪಿಗಳೂ ಕರಡಿಗಳೂ ಅವರನ್ನು ನಿಜವಾದ ಮನುಷ್ಯರೆಂದು ತಿಳಿದವಲ್ಲದೆ ಒಮ್ಮೆಲೆ ಯುದ್ಧವನ್ನು ನಿಲ್ಲಿಸಿಬಿಟ್ಟವು. ಆಗ ಯುದ್ಧವು ಅದೆಂತು ಮುಂದುವರಿಯುವದು? ತಮ್ಮ ಪ್ರಿಯ ಸ್ವಾಮಿಯಾದ ರಾಮ ಹಾಗೂ ಲಕ್ಷ್ಮಣ ಇವರ ಮೇಲೆ ಅದೇತು ಕಲ್ಲುಗಳನ್ನು ಸುರಿಸುವುದು? ಅವರು ಹಾಗೆ ಚಿಂತಿತರಾಗಿದ್ದನ್ನು ಕಂಡು ಈ ಪ್ರಕಾರದ ಬೂಟಾ''ವನ್ನು ಛಿನ್ನಭಿನ್ನಗೊಳಿಸುವುವರಲ್ಲಿಯೂ ಆ ಗಂಡಾಂತರಕ್ಷಣವನ್ನು ವ್ಯರ್ಥಗೊಳಿಸಿ ಸತ್ಯವನ್ನು ವಿಜಯಗೊಳಿಸುವುದರಲ್ಲಿಯೂ ಅವನಿಗೆ ಅದೆಷ್ಟು ಸಂತೋಷವಾಗಿರಬಹುದು? ಅವನು ತನ್ನ ಶಕ್ತಿಶಾಲಿಯಾದ ಧನುಷ್ಯದ ಮೇಲೆ ಒಂದು ಬಾಣವನ್ನೇರಿಸಿ ಹೊಡೆದನು. ಬಾಣವು ಆ ಎಲ್ಲ ಕಣ್ಕಟ್ಟಿನ ಛಾಯಾಮೂರ್ತಿಗಳೊಳಗಿಂದ ಸರಸರನೆ ಹಾಯ್ದು ಹೋಗುತ್ತಲೇ ಅವೆಲ್ಲವೂ ಮಾಯವಾಗಿ ಬಿಟ್ಟವು. ಎಲ್ಲವೂ ಚೊಕ್ಕಟವಾದದ್ದನ್ನು ಕಂಡು ಹನುಮಂತನ ಸೇನೆಗೆ ತಿರುಗಿ ಸಾಹಸ ಬಂದುಬಿಟ್ಟಿತು. ಸತ್ಯವಾದಿಯಾದ ಮನುಷ್ಯನೊಡನೆ ಸತ್ಯವಚನವೂ ಆ ಬಾಣದಂತೆಯೇ ಇರುತ್ತದೆ. ಅದು ಸಾವಿರ ಸುಳ್ಳುಗಳನ್ನೂ ಕಪಟಗಳನ್ನೂ ನಷ್ಟಗೊಳಿಸುವ ಶಕ್ತಿಯನ್ನು ತಳೆದಿರುತ್ತದೆ.

*　　*　　*　　*

ದಕ್ಷಿಣಭಾರತದ ಒಂದು ಪ್ರಾಚೀನ ಕಥೆಯಿದೆ. ರಾಜಾಬೇಲಾ ಎಂಬ ಹೆಸರಿನ ರಾಜನ ವಿಷಯದಲ್ಲಿ ಪ್ರಸಿದ್ಧವಿರುವದೇನಂದರೆ– ಅವನ ನಗೆಯು ವೈಲ್ದೂರದ ಪ್ರದೇಶವನ್ನು ಮಲ್ಲಿಗೆ ಹೂವಿನ ಸವಿಯಾದ ಸುಗಂಧದಿಂದ ತುಂಬಿ

ಬಿಡುತ್ತಿತ್ತು. ಆದರೆ ಅದಕ್ಕಾಗಿ ಆ ನಗೆಯು ಅವನ ಹೃದಯದ ಆನಂದ ಮಯವೂ ಸ್ವಾಭಾವಿಕವೂ ಆದ ಪ್ರಫುಲ್ಲತೆಯಿಂದ ಹೊರಬೀಳುವುದು ಆವಶ್ಯಕವಾಗಿತ್ತು. ಅವನು ನಿಜವಲ್ಲದ ಪ್ರಫುಲ್ಲತೆಯಿಂದ ನಗುವುದಕ್ಕೆ ಪ್ರಯತ್ನಿಸಿದರೆ ಅವನಿಗೆ ಆ ಫಲವು ಎಂದಿಗೂ ಉಂಟಾಗುತ್ತಿರಲಿಲ್ಲ. ಯಾಕಂದರೆ ಅವನ ಮನವು ಪ್ರಸನ್ನವಾಗಿದ್ದಾಗ ಅವನ ನಗೆಯು ಒಂದು ಸುಗಂಧಿತ ಪ್ರವಾಹವಾಗಿ ಪುಟಿಯುತ್ತಿತ್ತು.

ಆ ನಗೆಯ ಗುಣವು ಸಂಪೂರ್ಣವಾಗಿ ಆತನ ಸತ್ಯವಂತಿಕೆಯಲ್ಲಿತ್ತು.

ದುರ್ಯೋಧನ ರಾಜನ ಮಂದಿರದಲ್ಲಿ ಭೋಜನ ಮೊದಲಾದವು ತುಂಬ ಆಡಂಬರವುಳ್ಳವಾಗಿದ್ದವು. ಬೆಳ್ಳಿ ಬಂಗಾರದ ಪಾತ್ರೆಗಳಿದ್ದವು. ಅವಕ್ಕೆ ಹವಳ, ರತ್ನ ಹಾಗೂ ಹೊಳೆಹೊಳೆಯುವ ವಜ್ರಗಳನ್ನು ಕೆಚ್ಚಿದ್ದರು. ಶ್ರೀಕೃಷ್ಣನಿಗೆ ಭೋಜನದ ಸಲುವಾಗಿ ಔತಣ ಸಿಕ್ಕಿದ್ದರೂ ಅವನು ಹೋಗಲಿಲ್ಲ. ಅವನು ಅಂದೇ ಸಂಜೆಗೆ ಒಬ್ಬ ಬಡ ಶೂದ್ರನ ಮನೆಗೆ ಊಟಕ್ಕೆಂದು ಹೊರಟುಹೋದನು. ಅವನಿಂದ ಸಹ ಕೃಷ್ಣನು ಆಮಂತ್ರಿತನಾಗಿದ್ದನು. ಅಲ್ಲಿ ಸಾದಾ ಅಡಿಗೆಯಿತ್ತು. ಪಾತ್ರೆಗಳೂ ತೀರ ಸಾಧಾರಣವಾಗಿದ್ದವು. ಆದರೆ ಕೃಷ್ಣನು ಒಂದನ್ನು ಬಿಟ್ಟುಕೊಟ್ಟು ಇನ್ನೊಂದನ್ನು ಆರಿಸಿಕೊಂಡನು. ಯಾಕಂದರೆ ಶೂದ್ರನಿಂದ ಅರ್ಪಿತವಾದ ಊಟವಿದ್ದರೂ ಅದು ನಿಜವಾದ ಪ್ರೇಮದಿಂದ ಹಾಸುಹೊಕ್ಕಾಗಿತ್ತು. ದುರ್ಯೋಧನರಾಜನ ರಾಜಸೀ ಭೋಜನದ ವ್ಯವಸ್ಥೆಯನ್ನು ವ್ಯರ್ಥವಾದ ತೋರಿಕೆಯ ಸಲುವಾಗಿ ಮಾಡಲಾಗಿತ್ತು.

ಇನ್ನೊಂದು ಕಥೆಯಿದೆ. ಪ್ರತಾಪಶಾಲಿಯಾದ ರಾಮನು ಒಬ್ಬ ಅತಿ ತುಚ್ಛಳೂ, ಹಕ್ಕಿ ಬಲೆಗಾರ್ತಿಯೂ ಆದ ಸ್ತ್ರೀಯಳಲ್ಲಿ ಭೋಜನ ಮಾಡಿದನು ಅವಳು ಆವನ ಮುಂದೆ ಕೆಲವು ಹಣ್ಣುಹಂಪಲಗಳನ್ನೇ ಇಡಲಿಕ್ಕೆ ಸಾಧ್ಯವಿತ್ತು. ಯಾಕಂದರೆ ಅವಳ ಹತ್ತಿರ ಇನ್ನೇನೂ ಇರಲೇ ಇಲ್ಲ. ಆದರೆ

ತನ್ನ ಹತ್ತಿರವಿದ್ದವುಗಳಲ್ಲಿ ಎಲ್ಲಕ್ಕಿಂತಲೂ ಶ್ರೇಷ್ಠವಾದ ವಸ್ತುವನ್ನೇ ಅವಳು ನಿರ್ಮಲ ಹೃದಯದಿಂದ ಅವನಿಗೆ ಕೊಟ್ಟಳು. ಅದರಿಂದ ರಾಮನ ಹೃದಯವು ಆಕರ್ಷಿತವಾಗಿ ಹೋಯಿತಲ್ಲದೆ ಅವನು ನಿಜವಾದ ಹೃದಯದಿಂದ ಕೊಡಲಾದ ಆ ಕಾಣಿಕೆಯ ನೆನಪು ಅಳಿಯಬಾರದೆಂದು ಇಚ್ಛಿಸಿದನು. ಇಂದು, ಕೆಲವೊಂದು ಶತಮಾನಗಳು ಕಳೆದುಹೋಗಿದ್ದರೂ ಜನರು ಅದಕ್ಕಾಗಿಯೇ ಆಕೆಯ ವರ್ಣನೆ ಮಾಡುತ್ತಾರೆ.

ಜಲಾಲನು ಒಬ್ಬ ಬುದ್ಧಿವಂತನೂ ಒಬ್ಬ ಪ್ರಸಿದ್ಧ ಉಪದೇಶಕನೂ ಆಗಿದ್ದನು. ಒಂದು ದಿನ ಇಬ್ಬರು ತುರ್ಕೀ ಜನರು ಕೆಲವೊಂದು ಕಾಣಿಕೆ ತಕ್ಕೊಂಡು ಅವನ ಬಳಿಗೆ ಬಂದರು. ಅವರು ಅವನಿಂದ ಉಪದೇಶ ಕೇಳುವ ಆಶೆಯನ್ನಿಟ್ಟುಕೊಂಡಿದ್ದರು. ಯಾಕಂದರೆ ಅವರು ತೀರ ಬಡವರಾಗಿದ್ದರು. ಅವರ ಕಾಣಿಕೆ ಸಹ ಸಾಧಾರಣವಾಗಿತ್ತು. ಕೇವಲ ಒಂದು ಹಿಡಿ ಬೇಳೆ. ಜಲಾಲನ ಕೆಲವು ಶಿಷ್ಯರು ಕಾಣಿಕೆಯ ಕಡೆಗೆ ತಿರಸ್ಕಾರ ದೃಷ್ಟಿಯಿಂದ ನೋಡಿದರು. ಆಗ ಜಲಾಲನು ನುಡಿವದ್ದೇನಂದರೆ—

"ಒಮ್ಮೆ ಮಹಮ್ಮದ ಪೈಗಂಬರರಿಗೆ ತಮ್ಮ ಬಹಳಷ್ಟು ಕೆಲಸಗಳೊಳಗಿಂದ ಯಾವುದೋ ಒಂದನ್ನು ಸರಿಯಾಗಿ ನಡೆಸುವ ಸಲುವಾಗಿ ಧನದ ಆವಶ್ಯಕತೆಯುಂಟಾಯಿತು. ಕೊಡಲಿಕ್ಕೆ ಶಕ್ಯವಿರುವಷ್ಟು ಕೊಡಿರೆಂದು ಅವರು ತಮ್ಮ ಶಿಷ್ಯರಿಗೆ ಬೇಡಿದರು. ಕೆಲವರು ತಮ್ಮ ಹತ್ತಿರವಿದ್ದುದರ ಅರ್ಧ ಭಾಗವನ್ನು ಕೊಟ್ಟರು. ಕೆಲವರು ಮೂರನೇ ಭಾಗವನ್ನು ಕೊಟ್ಟರು. ಅಬೂಬಕರನು ತನ್ನ ಸರ್ವ ಧನವನ್ನು ಅವರಿಗೆ ಕೊಟ್ಟುಬಿಟ್ಟನು. ಪೈಗಂಬರರಿಗೆ ಈ ಪ್ರಕಾರ ಶಸ್ತ್ರಾಸ್ತ್ರಗಳೂ ಪಶು ಮೊದಲಾದವುಗಳೂ ಬಹಳಷ್ಟು ಸಿಕ್ಕುಬಿಟ್ಟವು. ಕೊನೆಯಲ್ಲಿ ಒಬ್ಬ ಬಡವಿಯಾದ ಸ್ತ್ರೀ ಬಂದಳು. ಅವಳು ತನ್ನ ಸರತಿಯಲ್ಲಿ ಮೂರು ಕಜ್ಜೂರಿಗಳನ್ನೂ ಗೋದಿಯ ಒಂದು ರೊಟ್ಟಿಯನ್ನೂ ಕಾಣಿಕೆಯೆಂದು ಕೊಟ್ಟಳು. ಆಕೆಯ ಹತ್ತಿರ ಇದ್ದುದೇ ಇಷ್ಟು. ಅದನ್ನು ನೋಡಿ ಅದೆಷ್ಟೋ ಜನರು ನಕ್ಕರು. ಆದರೆ ಪೈಗಂಬರರು ಅವರಿಗೆ





ತಮ್ಮದೊಂದು ಕನಸು ಹೇಳಿದರು. ಅದರಲ್ಲಿ, ಕೆಲವು ಸ್ವರ್ಗದೂತರು ಒಂದು ತಕ್ಕಡಿ ತಂದಿದ್ದರು. ಹಾಗೂ ಅವರು ಅದರ ಒಂದು ಪರಡಿಯಲ್ಲಿ ಆ ಎಲ್ಲರ ಕಾಣಿಕೆಯನ್ನು ಇಟ್ಟರು. ಇನ್ನೊಂದರಲ್ಲಿ ಕೇವಲ ಆ ಬಡ ಸ್ತ್ರೀಯಳ ಕಜ್ಜೂರಿಯ ಮೂರು ಬಟ್ಟೆಗಳನ್ನೂ ಒಂದು ರೊಟ್ಟಿಯನ್ನೂ ಇಟ್ಟರು. ತಕ್ಕಡಿ ಸ್ಥಿರವಾಯಿತು. ಯಾಕಂದರೆ ಆ ಪರಡಿಯೂ ಮೊದಲಿನದರಷ್ಟೇ ಭಾರಿ ಆಗಿಬಿಟ್ಟಿತು."

ಜಲಾಲನು ಮುಂದೆ ತಿಳಿಸಿ ಹೇಳಿದನು.—

"ಒಂದು ಸಾಧಾರಣ ಕಾಣಿಕೆಯನ್ನು ಸತ್ಯ ಹೃದಯದಿಂದ ಕೊಡಮಾಡಿದ್ದಾದರೆ ಅದು ಸಹ ಬಹು ಬೆಲೆಯ ಕಾಣಿಕೆಯಷ್ಟೇ ಬೆಲೆ ಬಾಳುತ್ತದೆ."

ಅದನ್ನು ಕೇಳಿ ಆ ತುರ್ಕಿಯರಿಬ್ಬರು ತುಂಬ ಸಂತುಷ್ಟರಾದರು. ಹಾಗೂ ಅವರ ಹಿಡಿ ಬೇಳೆಯ ಸಲುವಾಗಿ ನಗೆಯಾಡುವ ಸಾಹಸವನ್ನು ಮತ್ತೊಮ್ಮೆ ಯಾರೂ ಮಾಡಲಿಲ್ಲ.

*　　　*　　　*　　　*

ಸಣ್ಣ ಜಾತಿಯ ಒಬ್ಬ ಬಡ ಮನುಷ್ಯನು ಒಮ್ಮೆ ತನ್ನ ಕುಟುಂಬದ ಪಾಲನ ಮಾಡುವ ಸಲುವಾಗಿ ಬೇಟೆಯನ್ನು ಹುಡುಕುವುದರಲ್ಲಿ ಇಡಿಯ ದಿವಸವನ್ನು ಕಳೆದನು. ಆದರೆ ಅವನ ಕೈಗೆ ಏನೂ ಹತ್ತಲಿಲ್ಲ. ರಾತ್ರಿಯಾಗಿ ಬಿಟ್ಟರೂ ಅವನಿನ್ನೂ ಅಡವಿಯಲ್ಲಿಯೇ ಇದ್ದನು. ಅವನು ಒಂಟಿಗನು, ಹಸಿದು ನೀರಡಿಸಿದವನು, ಹಾಗೂ ತನ್ನ ಅಸಫಲ ಪ್ರಯತ್ನಗಳಿಂದ ದಣಿದು ಹೋದವನು ಯಾವುದೇ ಹಕ್ಕಿಯ ಗೂಡಾದರೂ ಸಿಗಬಹುದೆಂಬ ಆಶೆಯಿಂದ ಅವನು ಬೆಲ್ಲಪತ್ರಿಯ ಗಿಡವನ್ನೇರಿದನು. ಆ ಗಿಡದ ಮೂರೆಸಳಿನ ಪತ್ರಿಗಳು ಭಕ್ತರಿಂದ ಶಿವನಿಗೆ ಏರಿಸಲಾಗುತ್ತವೆ. ಆದರೆ ಅವನಿಗೆ ಅಲ್ಲಿ ಯಾವ ಹಕ್ಕಿಯ ಗೂಡೂ ಸಿಗಲಿಲ್ಲ. ಅವನಿಗೆ ತನ್ನ ಹೆಂಡತಿಯ ನೆನಪಾಯಿತು.

ಬಳಿಕ ತನ್ನ ಹಾಗೂ ಊಟದ ಆಶೆಯಲ್ಲಿ ಕುಳಿತುಕೊಂಡಿದ್ದ ಮಕ್ಕಳ ನೆನಪು ಬಂತು. ಅವನು ಅಳತೊಡಗಿದನು. ಕರುಣೆಯ ಕಣ್ಣೀರಲ್ಲಿ ದೊಡ್ಡ ಬಲ ವಿರುತ್ತದೆಂದು ಕಥೆಯಲ್ಲಿ ಮುಂದೆ ಬರುತ್ತಿದೆ. ತನ್ನ ನಿಜವಾದ ದುಃಖದಿಂದ ಹರಿದು ಬರುವ ಕಣ್ಣೀರು ಹೆಚ್ಚು ಬೆಲೆಯುಳ್ಳದ್ದಾಗಿರುತ್ತದೆ.

ಬೇಟೆಗಾರನ ಕಣ್ಣೀರು ಬೆಲ್ಲಪತ್ರಿಯ ಗಿಡದ ಎಲೆಗಳ ಮೇಲೆ ಉರುಳಿದವು. ಹಾಗೂ ಅವುಗಳನ್ನು ತೆಗೆದುಕೊಂಡು ಅವು ಆ ಗಿಡದಡಿಯಲ್ಲಿ ನೆಲದ ಮೇಲೆ ಇಟ್ಟ ಶಿವಲಿಂಗದ ಮೇಲೆ ಹೋಗಿಬಿದ್ದವು. ಅದೇ ಹೊತ್ತಿಗೆ ಒಂದು ಹಾವು ಆ ಮನುಷ್ಯನನ್ನು ಕಚ್ಚಿಬಿಟ್ಟಿತು. ಅದರಿಂದ ಅವನು ಆಗಲೇ ಸತ್ತು ಹೋದನು. ಯಮದೂತರು ಆತನ ಆತ್ಮವನ್ನು ದೇವಲೋಕಕ್ಕೆ ತೆಗೆದುಕೊಂಡು ಹೋದರು. ಮತ್ತು ಅದನ್ನು ಶಿವನ ಮುಂದೆ ಇಳಿಸಿದರು.

ಸ್ವರ್ಗದ ದೇವತೆಗಳು ಒಂದೇ ಸ್ವರದಲ್ಲಿ ಕೂಗೆಬ್ಬಿಸಿದರು — ಇಲ್ಲಿ ಈ ಮನುಷ್ಯನ ಆತ್ಮಕ್ಕೆ ಯಾವ ಸ್ಥಾನವೂ ಇಲ್ಲ. ಇವನು ನೀಚ ಜಾತಿಯವನು. ಇವನು ವ್ರತನಿಯಮಗಳನ್ನು ಅಲ್ಲಗಳೆದಿದ್ದಾನೆ. ಅಪವಿತ್ರವಾದ ತಿನಸುಗಳನ್ನು ತಿಂದಿದ್ದಾನೆ. ಹಾಗೂ ದೇವತೆಗಳ ಮೇಲೆ ಯಾವಾಗಲೂ ಮುಡಿಸಬೇಕಾಗುವ ಯಾವ ಮುಡಿಪುಗಳನ್ನೂ ಇವನು ಮುಡಿಸಿಲ್ಲ.

ಆದರೆ ಶಿವನು ಅವರಿಗೆ ಹೇಳಿದ್ದೇನಂದರೆ— "ಇವನು ನನ್ನ ಮೇಲೆ ಬೆಲ್ಲ ಪತ್ರಿಗಳನ್ನು ಏರಿಸಿದ್ದಾನೆ. ವಿಶೇಷವಾಗಿ ಇವನು ತನ್ನ ನಿಜವಾದ ಕಣ್ಣೀರನ್ನು ನನಗೆ ಅರ್ಪಿಸಿದ್ದಾನೆ. ಸತ್ಯ ಹೃದಯದ ಜಾತಿಯು ನೀಚವಾಗಲಾರದು."

ಶಿವನು ಅವನನ್ನು ತನ್ನ ಸ್ವರ್ಗದಲ್ಲಿ ಸೇರಿಸಿಕೊಂಡನು.

ಈ ಎಲ್ಲ ಕಥೆಗಳು ನಮಗೆ ತೋರಿಸುವವೇನಂದರೆ— ಸರ್ವ ದೇಶಗಳಲ್ಲಿಯೂ ಸರ್ವ ಕಾಲಗಳಲ್ಲಿಯೂ ಮನುಷ್ಯ ಹಾಗೂ ಅವನ ದೇವತೆಗಳು

ಸತ್ಯವಂತಿಕೆಯನ್ನು ಮನ್ನಿಸುತ್ತಿದ್ದಾರೆ. ಅವರು ಸರ್ವ ವಸ್ತುಗಳಲ್ಲಿರುವ ಸತ್ಯವನ್ನೂ ಸರಲತೆಯನ್ನೂ ಪ್ರೇಮಿಸುತ್ತಾರೆ.

ಅಸತ್ಯದಲ್ಲಿ ನೆಲೆಸಿದವರು ಮನುಷ್ಯಜಾತಿಗೆ ಶತ್ರುಗಳು.

ಸರ್ವ ಮಾನವರಿಗೆ ಸಂಬಂಧಿಸಿದ ವಿಜ್ಞಾನ ಹಾಗೂ ದರ್ಶನ, ಖಗೋಲ ವಿದ್ಯೆ, ಗಣಿತ, ರಸಾಯನ ವಿದ್ಯೆ, ಹಾಗೂ ಭೌತಿಕ ವಿಜ್ಞಾನ ಇವು ಸತ್ಯದ ಸಂಶೋಧನ ಮಾಡುವವು. ಆದರೆ ಸಣ್ಣ ಸಣ್ಣ ಸಂಗತಿಗಳಿಗೆ ಸಹ ದೊಡ್ಡ ಸಂಗತಿಗಳಿಗಿದ್ದಷ್ಟೇ ಸತ್ಯದ ಅವಶ್ಯಕತೆಯಿದೆ.

ಚಿಕ್ಕ ಮಕ್ಕಳು ಸತ್ಯವಾದಿಗಳಾಗುವುದನ್ನು ಕಲಿಯಬೇಕಾದರೆ ಅವರು ದೊಡ್ಡವರಾಗುವ ದಾರಿ ಕಾಯಬಾರದು. ಸತ್ಯವಾದಿಯಾಗುವ ಹಾಗೂ ಸತ್ಯದಲ್ಲಿ ಸ್ಥಿರವಾಗಿ ನಿಲ್ಲುವ ಪಾಠವನ್ನು ಹಾಕಿಕೊಡುವ ಸಲುವಾಗಿ ಯಾವ ಸಮಯವೂ ಅತಿ ಶೀಘ್ರತೆಯದಾಗುವದಿಲ್ಲ.

ಅದಕ್ಕಾಗಿ ಸತ್ಯ ಮಾತಾಡುವ ಇಚ್ಛೆಯಿದ್ದರೂ ಒಮ್ಮೊಮ್ಮೆ ಮನುಷ್ಯನಿಗೆ ಹಾಗೆ ಮಾತಾಡುವುದು ಅತಿ ಕಠಿಣವಾಗಿ ಬಿಡುತ್ತದೆ. ಆದಕಾರಣ ಎಲ್ಲಕ್ಕೂ ಮೊದಲು ಮನುಷ್ಯನಿಗೆ ಸತ್ಯವನ್ನು ತಿಳಿಯುವುದೂ ಅದನ್ನರಸುವುದೂ ಬೇಕು· ಹಾಗೂ ಅದು ಯಾವಾಗಲೂ ಅಷ್ಟೊಂದು ಸರಲವಾಗಿರುವದಿಲ್ಲ.

ಕಾಶಿಯ ರಾಜನಿಗೆ ನಾಲ್ವರು ಯುವಕ ಪುತ್ರರಿದ್ದರು. ಪ್ರತಿಯೊಬ್ಬರು ತಮ್ಮ ತಂದೆಯ ರಥಿಕನಿಗೆ— "ನಾನು ಪಲಾಶ ಎಂಬ ಗಿಡವನ್ನು ನೋಡ ಬೇಕೆನ್ನುತ್ತೇನೆ" ಎಂದರು.

"ನಾನು ನಿಮಗೆ ತೋರಿಸುವೆನು" ಎಂದು ರಥಿಕನು ಮರುನುಡಿದನು. ಹಾಗೂ ಎಲ್ಲರಿಗಿಂತ ಹಿರಿಯವನಿಗೆ ಅವನು ತನ್ನೊಡನೆ ಹೊರಟುಬರಲು ಹೇಳಿದನು.

ಅಡವಿಯಲ್ಲಿ ಅವನು ರಾಜಕುಮಾರನಿಗೆ ಪಲಾಶ ವೃಕ್ಷವನ್ನು ತೋರಿಸಿದನು. ಆ ಸಮಯಕ್ಕೆ ಯಾವ ಋತುಗಾಲವಿತ್ತೆಂದರೆ ಅದರ ಮೇಲೆ ಚಿಗುರು, ಎಲೆ, ಹೂ ಇವೇನೂ ಇರಲಿಲ್ಲ. ಆದಕಾರಣ ರಾಜಕುಮಾರನು ಕೇವಲ ಒಂದು ಒಣಗಿ ಮೊರಟಾದ ಕಟ್ಟಿಗೆಯ ಬೊಡ್ಡಿಯನ್ನೇ ನೋಡಿದನು.

ಆದಾದ ಕೆಲವು ವಾರಗಳಾದ ಬಳಿಕ ಎರಡನೇ ರಾಜಕುಮಾರನು ರಥದಲ್ಲಿ ಸಂಚಾರ ಹೊರಟನು. ಅವನು ಪಲಾಶವನ್ನು ನೋಡಿದನು. ಅದನ್ನವನು ಎಲೆಗಳಿಂದ ಹೊತ್ತುದಾಗಿ ಕಂಡನು.

ಅದೇ ಋತುವಿನಲ್ಲಿ ಇನ್ನೂ ಕೆಲವು ದಿನಗಳಾದ ಮೇಲೆ ಮೂರನೆಯವನ ಸರತಿ ಬಂತು. ಅವನು ಹೂಗಳಿಂದ ಕೆಂಪಾಗಿ ಬಿಟ್ಟ ಗಿಡವನ್ನು ನೋಡಿದನು.

ಎಲ್ಲಕ್ಕೂ ಹಿಂದುಗಡೆಯಲ್ಲಿ ನಾಲ್ಕನೆಯವನು ಗಿಡವನ್ನು ನೋಡಿದನು. ಆಗ ಅದರ ಫಲಗಳು ಪಕ್ವವಾಗಿ ಬಿಟ್ಟಿದ್ದವು.

ಒಂದು ದಿನ ನಾಲ್ವರೂ ಬಂಧುಗಳು ಒತ್ತಟ್ಟಿಗೆ ಸೇರಿದಾಗ ಒಬ್ಬನು ಕೇಳಿದನು—"ಪಲಾಪ ಗಿಡವು ಹೇಗಿರುತ್ತದೆ?"

ಎಲ್ಲಕ್ಕೂ ಹಿರಿಯವನು ಹೇಳಿದನು — "ಒಂದು ಬಚ್ಚಬರಿಯ ಬೊಡ್ಡೆಯ ಹಾಗೆ."

ಎರಡನೆಯವನು ಹೇಳಿದನು—"ಫಲಪುಷ್ಪಗಳಿಂದ ಬಾಳೆಯ ಗಿಡದ ಹಾಗೆ."

ಮೂರನೆಯವನು—"ಕೆಂಪು ಗುಲಾಬಿ ಹೂವಿನ ಗೊಂಚಲಿನ ಹಾಗೆ."

ಹಾಗೂ ನಾಲ್ಕನೆಯವನು — "ಅದೊಂದು ಪ್ರಕಾರದ ಜಾಲಿಯ ಗಿಡದಂತೆ ತೋರುತ್ತದೆ. ಆದರಲ್ಲಿ ಹಣ್ಣುಗಳೂ ಆಗುತ್ತವೆ."

ನಾಲ್ವರ ಅಭಿಪ್ರಾಯಗಳೂ ಒಂದುಗೂಡುವಂತೆ ಕಾಣಿಸಲಿಲ್ಲ. ಅವರೆಲ್ಲರೂ ಕೂಡಿಕೊಂಡು ತೀರ್ಮಾನಗೊಳಿಸುವ ಸಲುವಾಗಿ ತಮ್ಮ ತಂದೆಯ ಬಳಿಗೆ ಹೋದರು. ಒಬ್ಬನಾದ ಮೇಲೆ ಒಬ್ಬನು ಪಲಾಶ ಗಿಡ ವನ್ನು ನೋಡಿದ್ದರಿಂದ ಅವರು ನಗೆಗೀಡಾದರೆಂದು ರಾಜನು ಕೇಳಿದನು. ಆಗ ಅವನು ಅವರಿಗೆ ಹೇಳಿದ್ದೇನಂದರೆ—

"ನೀವು ನಾಲ್ವರೂ ಸರಿಯಾಗಿ ಹೇಳುತ್ತೀರಿ. ಆದರೆ ಗಿಡವು ಎಲ್ಲ ಋತುಗಳಲ್ಲಿ ಒಂದೇ ತೆರನಾಗಿ ಇರುವದಿಲ್ಲೆಂಬದನ್ನು ನೀವು ನಾಲ್ವರೂ ಮರೆತಿರುವಿರಿ."

ತಾನು ಕಂಡಿದ್ದನ್ನು ಪ್ರತಿಯೊಬ್ಬನೂ ಹೇಳಿದನು. ಹಾಗೂ ಇನ್ನೊಬ್ಬನು ಅರಿತಿದ್ದನ್ನು ಒಡಂಬಡಲು ಪ್ರತಿಯೊಬ್ಬನೂ ಅಸ್ವೀಕಾರ ಮಾಡಿದನು.

ಈ ಪ್ರಕಾರ ಜನರು ಪ್ರಾಯಶಃ ಸತ್ಯದ ಒಂದು ಚಿಕ್ಕದಾದ ಅಂಶ ವನ್ನು ಮಾತ್ರ ತಿಳಿಯುತ್ತಾರೆ. ಹಾಗೂ ತಾವು ಅದನ್ನು ಸಂಪೂರ್ಣವಾಗಿ ಬಲ್ಲೆವೆಂದು ತಿಳಕೊಳ್ಳುವುದೇ ಅವರ ಭ್ರಾಂತಿ.

ಬಾಲ್ಯದಲ್ಲಿಯೇ ಸತ್ಯದ ಶೋಧವನ್ನು ಹೆಚ್ಚು ಹೆಚ್ಚಾಗಿ ಮಾಡುವ ಸಲುವಾಗಿ ಅದನ್ನು ಯೋಗ್ಯವಾಗಿ ಪ್ರೇಮಿಸಲು ಕಲಿತುಬಿಡುವುದರಿಂದ ಈ ತರದ ಭ್ರಾಂತಿಯು ಅದೆಷ್ಟೋ ಕಡಿಮೆಯಾಗಿ ಬಿಡುತ್ತದೆ.

*                *                *                *

ಹಿಮಾಲಯ ಪರ್ವತ ಪ್ರದೇಶದ ಕುಮಾಯು ಎಂಬ ಹೆಸರಿನ ಸ್ಥಾನದ ರಾಜನು ಒಂದು ಸಾರೆ ಅಲ್ಮೋಡೆಯ ಘಟ್ಟದಲ್ಲಿ ಬೇಟೆಯಾಡಲು ಹೋದನು. ಆ ಕಾಲಕ್ಕೆ ಆ ಸ್ಥಾನವು ನಿಬಿಡವಾದ ಅರಣ್ಯದಿಂದ ಬಿಗಿದಿತ್ತು.

ಒಂದು ಮೊಲವು ಪೊದೆಯೊಳಗಿಂದ ಹೊರಬಿದ್ದಿತು. ರಾಜನು ಅದನ್ನು ಬೆಂಬಳಿಸಿದನು. ಒಮ್ಮಿಂದೊಮ್ಮೆ ಏನಾಯಿತೆಂದರೆ ಆ ಮೊಲವು ಚಿರತೆ

ಯಾಗಿ ಮಾರ್ಪಾಡುಗೊಂಡು ಶೀಘ್ರವೇ ದೃಷ್ಟಿಯಿಂದ ಮಾಯವಾಗಿ ಹೋಯಿತು.

ಆ ಆಶ್ಚರ್ಯಜನಕವಾದ ಘಟನೆಯಿಂದ ಸ್ತಂಭಿತನಾದ ರಾಜನು ಬುದ್ಧಿವಂತರ ಒಂದು ಸಭೆ ಕರೆದು ಅವರಿಗೆ ಅದರ ಅರ್ಥವನ್ನು ಕೇಳಿದನು.

ಅವರು ಉತ್ತರ ಕೊಟ್ಟಿದ್ದೇನಂದರೆ—"ಯಾವ ಸ್ಥಳದಲ್ಲಿ ಚಿರತೆಯು ಕಣ್ಮರೆಯಾಯಿತೋ ಅಲ್ಲಿ ತಾವೊಂದು ನವನಗರವನ್ನು ನಿರ್ಮಿಸಬೇಕು. ಯಾಕಂದರೆ ಕೇವಲ ಮನುಷ್ಯರು ದೊಡ್ಡ ಸಂಖ್ಯೆಯಲ್ಲಿ ಕುಳಿತುಕೊಳ್ಳ ಬೇಕಾಗಿರುವ ಸ್ಥಳದಲ್ಲಿ ಮಾತ್ರ ಅದು ನಿಲ್ಲದೆ ಓಡಿಹೋಗುವದು—ಎಂದು ಅದರರ್ಥ."

ಈ ಪ್ರಕಾರ ನವನಗರವನ್ನು ಕಟ್ಟಿಸುವ ಸಲುವಾಗಿ ದಂಡಿನೆಗಾರರು ಕೆಲಸಕ್ಕೆ ಹಚ್ಚಲ್ಪಟ್ಟರು. ಕೊನೆಗೆ ಒಂದು ಸ್ಥಳದಲ್ಲಿ ನೆಲದ ಬಿರುಸುತನ ನೋಡುವ ಸಲುವಾಗಿ ಅವರು ಕಬ್ಬಿಣದ ಒಂದು ದೊಡ್ಡ ಮೊಳೆಯನ್ನು ನೆಡಸಿದರು. ಆ ಸಮಯಕ್ಕೆ ಒಮ್ಮಿಂದೊಮ್ಮೆ ನೆಲವು ತುಸು ನಡುಗಿತು.

"ತಡೆಯಿರಿ" ಎಂದು ಬಲ್ಲವರು ಕೂಗಿದರು. "ಅದರ ತುದಿಯು ಸರ್ಪರಾಜನಾದ ಶೇಷನಾಗನ ದೇಹದಲ್ಲಿ ಚುಚ್ಚಿಹೋಗಿದೆ. ಈ ಸ್ಥಾನದಲ್ಲಿ ಇನ್ನು ನಗರವನ್ನು ಕಟ್ಟಿಸುವುದು ಸಾಧ್ಯವಿಲ್ಲ."

ಕೊನೆಯಲ್ಲಿ ಆ ಕಥೆಯೊಳಗೆ ಸಹ ಹೇಳಲಾಗಿದೆ. ಏನಂದರೆ—ಆ ಕಬ್ಬಿಣದ ಮೊನೆಯನ್ನು ಪೃಥ್ವಿಯಿಂದ ಹೊರಗೆ ತೆಗೆದು ಬಿಟ್ಟರೆ ಅದೆಲ್ಲ ಶೇಷನಾಗನ ರಕ್ತದಿಂದ ಕೆಂಪಾಗಿ ಬಿಟ್ಟಿತ್ತು.

"ಇದಂತೂ ಬಹು ದುಃಖದ ಸಂಗತಿ"ಯೆಂದು ರಾಜನು ನುಡಿದನು. "ಆದರೆ ಇಲ್ಲಿ ನಗರವನ್ನು ನಿರ್ಮಿಸುವುದೆಂದು ನಾವು ನಿಶ್ಚಯಿಸಿಬಿಟ್ಟಿದ್ದ ರಿಂದ ಈಗ ನಿರ್ಮಿಸಲೇಬೇಕಾಗುವದು."

ಆ ಪಂಡಿತರು ಸಿಟ್ಟು ತುಂಬಿ ಭವಿಷ್ಯ ನುಡಿವದ್ದೇನಂದರೆ—"ನಗರದ ಮೇಲೆ ಏನೋ ಭಾರವಾದ ವಿಪತ್ತು ಬರುವದು. ಅಲ್ಲದೆ ರಾಜನ ವಂಶವೂ ಶೀಘ್ರವಾಗಿ ನಷ್ಟಭ್ರಷ್ಟವಾಗಿ ಬಿಡುವದು."

ಅಲ್ಲಿಯ ನೆಲವು ಬೆಳೆಯುಳ್ಳದ್ದು. ಹಾಗೂ ನೀರು ಸಹ ವಿಪುಲ. ಆರುನೂರು ವರ್ಷಗಳಿಂದ ಆಲ್ಮೋಡಾ ನಗರವು ಆ ಅರಣ್ಯದಲ್ಲಿ ನೆಲೆಸಿ ನಿಂತಿದೆ. ಹಾಗೂ ಅದರ ನಾಲ್ಕೂ ಮಗ್ಗಲು ಹಬ್ಬಿರುವ ಹೊಲಗದ್ದೆಗಳು ಕಾಳುಕಡಿಗಳನ್ನು ಬೆಳೆದು ಕೊಡುತ್ತವೆ.

ಈ ಪ್ರಕಾರ ಆ ಪಂಡಿತರು ಬುದ್ಧಿವಂತರಾಗಿದ್ದರೂ ತಮ್ಮ ಭವಿಷ್ಯ ವಾಣಿಯಲ್ಲಿ ಭ್ರಾಂತರಾಗಿ ಬಿಟ್ಟಿದ್ದರು. ಅವರು ಸತ್ಯವಂತರೆನ್ನುವುದಕ್ಕೆ ಸಂಶಯವಿಲ್ಲ. ಹಾಗೂ ತಾವು ಸತ್ಯವನ್ನೇ ಆಡುತ್ತಿದ್ದೇವೆಂದು ಅವರಿಗೆ ವಿಶ್ವಾಸವಿತ್ತು. ಪ್ರಾಯಶಃ ಜನರು ಹೀಗೆ ಭ್ರಾಂತರಾಗುತ್ತಾರಲ್ಲದೆ ಅದನ್ನೇ ವಾಸ್ತವಿಕತೆಯೆಂದು ತಿಳಿದುಕೊಳ್ಳುತ್ತಾರೆ. ಅದು ಕೇವಲ ಅಂಧವಿಶ್ವಾಸ ವೆನಿಸುತ್ತದೆ.

ಪುಟ್ಟ ಬಾಲಕರೇ, ಜಗತ್ತು ಅಂಧವಿಶ್ವಾಸಗಳಿಂದ ತುಂಬಿತುಳುಕುತ್ತಿದೆ. ಅಧಿಕಕ್ಕಿಂತ ಅಧಿಕವಾಗಿ ಸತ್ಯವನ್ನು ಹುಡುಕುವದಕ್ಕೆ ಎಲ್ಲಕ್ಕಿಂತ ಒಳ್ಳೆಯ ಪದ್ಧತಿಯಾಗಿ ಮನುಷ್ಯನಿಗೆ ನಿಲುಕಬಲ್ಲದ್ದಾವುದೆಂದರೆ—ಯಾವಾಗಲೂ ತನ್ನ ವಿಚಾರ, ಕಾರ್ಯ ಹಾಗೂ ವಚನಗಳಲ್ಲಿ ಹೆಚ್ಚು ಹೆಚ್ಚು ನಿಷ್ಕಪಟನಾಗಿರುವುದು. ಯಾಕಂದರೆ ಎಲ್ಲ ಸಂಗತಿಗಳಲ್ಲಿಯೂ ಹೆರರಿಗೆ ಮೋಸವನ್ನೊಡ್ಡುವುದನ್ನು ಬಿಟ್ಟುಕೊಡುವುದರಿಂದಲೇ ಮನುಷ್ಯನು ತನ್ನ ತಾನು ಕಡಿಮೆ ಕಡಿಮೆ ಮೋಸಕ್ಕೀಡು ಮಾಡಿಕೊಳ್ಳುವುದನ್ನು ಕಲಿಯುತ್ತಾನೆ.

# ಯೋಗ್ಯ ಪರಿಶೀಲನೆ

ತೀರ ಸರಳವಾದ ಒಂದು ಕಂಬಿಯನ್ನು ತೆಗೆದುಕೊಂಡು ಅದರ ಅರ್ಧ ಭಾಗವನ್ನು ನೀರಲ್ಲಿ ಮುಳುಗಿಸಿ ಹಿಡಿಯಿರಿ. ಕಂಬಿಯು ಮಧ್ಯದಿಂದ ಡೊಂಕಾದಂತೆ ಕಾಣಿಸುತ್ತದೆ. ಆದರೆ ಅದರ ಆ ರೂಪು ಸಟೆಯಾದದ್ದು. ಹಾಗೂ ಕಂಬಿಯು ನಿಜವಾಗಿ ಡೊಂಕವೇ ಆಗಿದ್ದರೆ ನಿಮ್ಮ ವಿಚಾರವೇ ತಪ್ಪೆಂದು ತಿಳಿಯಿರಿ. ಕಂಬಿಯನ್ನು ನೀರೊಳಗಿಂದ ಹೊರಗೆ ತೆಗೆದರೆ ಅದು ಮೊದಲಿನಂತೆಯೆ ಸರಳವಾಗಿದೆಯೆಂಬುದನ್ನು ನೀವು ನೋಡುವಿರಿ.

ಇದಕ್ಕೆ ವಿರುದ್ಧವಾಗಿ ಒಂದು ಡೊಂಕು ಕಂಬಿಯನ್ನು ಇದೇ ರೀತಿಯಾಗಿ ನೀರಲ್ಲಿ ನಿಲ್ಲಿಸಿಬಿಟ್ಟರೆ ಅದು ಸರಳವಾಗಿರುವಂತೆ ತೋರಲೂಬಹುದಾಗಿದೆ.

ಕೆಲವು ಮನುಷ್ಯರು ಆ ಕಂಬಿಯಂತೆ ಇರುತ್ತಾರೆ. ಕೆಲವರು ಸತ್ಯವಂತರಾಗಿರುತ್ತಾರೆ. ಆದರೆ ಅವರು ಹಾಗೆ ತೋರುವದಿಲ್ಲ. ಕೆಲವರು ಸತ್ಯವಂತರಾಗಿ ತೋರುತ್ತಾರೆ. ಆದರೆ ಅವರು ಮೋಸಗಾರರಾಗಿರುತ್ತಾರೆ. ಹೀಗೆ ಅವರು ಮಾಯಾವಿರೂಪವನ್ನು ಧಾರಣಮಾಡಿಕೊಂಡಿರುತ್ತಾರೆ. ಆದಕಾರಣ ಬಾಹ್ಯರೂಪವನ್ನು ನಾವು ತೀರ ಕಡಿಮೆ ನಂಬಲಿಕ್ಕೆ ಬೇಕು.

ಆದರೊಡನೆ ಯಾವನಾದರೂ ವ್ಯಕ್ತಿಯ ವಿಷಯದಲ್ಲಿ ಅಭಿಪ್ರಾಯವನ್ನು ನಿಶ್ಚಿತಗೊಳಿಸುವುದಾದರೆ ತುಂಬ ಎಚ್ಚರಿಕೆಯಿಂದ ವರ್ತಿಸುವುದರ ಆವಶ್ಯಕತೆಯಿರುತ್ತದೆ.

ಭಾರತ ವರ್ಷದಲ್ಲಿ ಒಬ್ಬ ಸಾಧುವು ಒಮ್ಮೆ ಭಿಕ್ಷೆಯನ್ನು ಬೇಡುತ್ತ ಬೇಡುತ್ತ ಒಂದು ದೇಶವನ್ನು ಹೊಕ್ಕನು. ಒಂದು ದೊಡ್ಡಿಯಲ್ಲಿ ಆವನಿಗೊಂದು ಟಗರು ಕಣ್ಣಿಗೆ ಬಿತ್ತು. ಪ್ರಾಣಿಯು ಆ ಸಮಯಕ್ಕೆ ಸಿಟ್ಟಿನಲ್ಲಿದ್ದಿತೇನೋ. ಅದು ಸಾಧುವಿನ ಮೇಲೆ ಹಾರಿಬೀಳುವ ಸಿದ್ಧತೆಯಲ್ಲಿ ತನ್ನ ತಲೆಯನ್ನು ಕೆಳಗೆ ಮಾಡಿ ಕೆಲವೊಂದು ಹೆಜ್ಜೆ ಹಿಂದೆ ಸರಿಯಿತು.

“ಭಲೆ!” ಎಂದು ಆ ಧರ್ಮಾಭಿಮಾನಿಯಾದ ಸಾಧುವು ನುಡಿದುದೇನೆಂದರೆ—“ಈ ಪ್ರಾಣಿಯು ಅದೆಷ್ಟು ಜಾಣ ಹಾಗೂ ಒಳ್ಳೆಯದಾಗಿದೆ. ನಾನೊಬ್ಬ ಸದ್ಗುಣಿಯಾದ ವ್ಯಕ್ತಿಯೆಂಬುದು ಇದಕ್ಕೆ ತಿಳಿದಿದೆ. ನನ್ನನ್ನು ವಂದಿಸುವ ಸಲುವಾಗಿಯೇ ಇದು ನನ್ನ ಎದುರಿಗೆ ತಲೆಬಾಗಿಸಿದೆ.”

ಅದೇ ಸಮಯಕ್ಕೆ ಟಗರು ಆತನ ಮೇಲೆ ಸರಿಯಾಗಿ ದುಮುಕಿಬಿದ್ದಿತು. ಅಲ್ಲದೆ ತನ್ನ ತಲೆಯ ಒಂದು ಢಿಕ್ಕಿಯಿಂದ ಆ ಸದ್ಗುಣಿಯಾದ ವ್ಯಕ್ತಿಯನ್ನು ನೆಲಕ್ಕೆ ಕೆಡವಿ ಬಿಟ್ಟಿತು.

ಅನಧಿಕಾರಿಗಳಾದವರ ವಿಷಯದಲ್ಲಿ ವಿಶ್ವಾಸ ಹಾಗೂ ಸಹಾನುಭೂತಿ ತೋರಿಸುವುದರಿಂದ ಇದೇ ಗತಿಯುಂಟಾಗುತ್ತದೆ. ಕೆಲವು ಜನರು ಭಯಂಕರವಾಗಿದ್ದರೂ ನಿರ್ದೋಷಿಗಳಾಗಿ ಕಾಣಿಸುತ್ತಾರೆ. ಹೇಗೆಂದರೆ ಕಥೆಯೊಳಗಿನ ಆ ತೋಳನು ದನಗಾಹಿಯ ಸಡಿಲಂಗಿಯನ್ನು ತೊಟ್ಟುಕೊಂಡಿತ್ತು. ಹಾಗೂ ಕುರಿಯು ಅದನ್ನು ತನ್ನ ಸ್ವಾಮಿಯೆಂದು ತಿಳಕೊಂಡು ಕುಳಿತಿತ್ತು. ಇದಕ್ಕೆ ವಿಪರೀತವಾಗಿ ಕೆಲವರು ಭಯಂಕರ ಕಾಣಿಸಿದರೂ ಇರುತ್ತಿರುವುದು ಹಾಗಲ್ಲ. ಹೇಗೆಂದರೆ— ಬೇರೊಂದು ಕಥೆಯೊಳ

ಗಿನ ಕತ್ತ್ರಿಯು ಸಿಂಹದ ತೊಗಲು ಹೊದ್ದುಕೊಂಡಿದ್ದರಿಂದ ಅದು ಭಯಾನಕ ವಾಗಿ ಕಾಣಿಸಿಕೊಳ್ಳಹತ್ತಿತು.

*　　*　　*　　*

ಎಲ್ಲಿ ಮನುಷ್ಯನು ಅನ್ನಿಗರ ಬಾಹ್ಯರೂಪವನ್ನು ನಂಬುವ ತಪ್ಪು ಮಾಡಬಲ್ಲನೋ ಅಲ್ಲಿ ಅದಕ್ಕೆ ವಿಪರೀತವಾಗಿ ಅವನು ಅನ್ನಿಗನ ವಿಷಯದಲ್ಲಿ ಅನುದಾರ ಹಾಗೂ ಚಂಚಲವಾದ ಅಭಿಪ್ರಾಯವನ್ನು ತಳೆಯುವ ಭ್ರಮೆ ಯಲ್ಲಿಯೂ ಬೀಳಬಲ್ಲನು

ಘಾರಿಸದ ಶಹೆ ಇಸ್ಮಾಯಿಲ ಸಫವಿಯು ಖುರಾಸಾನದ ರಾಜ್ಯವನ್ನು ಗೆದ್ದುಕೊಂಡು ತನ್ನ ರಾಜಧಾನಿಗೆ ತಿರುಗಿ ಬರುತ್ತಿದ್ದನು. ಆವಾಗ ಹಾತಿಫೀ ಕವಿಯ ವಾಸಸ್ಥಳದ ಹತ್ತರದಿಂದ ಸಾಗುತ್ತಿರುವಾಗ ಅವನ ಮನದಲ್ಲಿ ಕವಿ ಯನ್ನು ಕಾಣಬೇಕೆಂಬ ಇಚ್ಛೆಯುಂಟಾಯಿತು. ಆ ಪ್ರಸಿದ್ಧ ವ್ಯಕ್ತಿಯನ್ನು ನೋಡಬೇಕೆನ್ನುವ ಆತನ ಇಚ್ಛೆಯು ಅದೆಷ್ಟು ಪ್ರಬಲವಾಗಿ ನಿಂತಿತೆಂದರೆ— ಆ ಮನೆಯ ಸಿಂಹದ್ವಾರದ ವರೆಗಾದರೂ ಹೋಗಬಲ್ಲೆನೆಂಬ ಧೈರ್ಯವೂ ಅವನಲ್ಲಿ ಉಳಿಯಲಿಲ್ಲ. ಹೊರಗೋಡೆಯ ಬಳಿಯಲ್ಲಿ ನೇತಾಡುವ ಒಂದು ಗಿಡದ ತೊಂಗಲಿನ ಮೇಲೆ ಅವನ ದೃಷ್ಟಿ ಬಿತ್ತು. ಅವನು ಅದರ ಆಧಾರ ದಿಂದ ಜೋಲು ಬಿದ್ದನಲ್ಲದೆ ತೂಗಾಡಿ ಆ ಗೋಡೆಯನ್ನು ಜಿಗಿದು ಕವಿಯ ಹೂದೋಟದಲ್ಲಿ ಹೋಗಿ ಹಾರಿಕೊಂಡನು.

ಈ ಪ್ರಕಾರ ಅಕಸ್ಮಾತ್ತಾಗಿ ಯಾರಾದರೂ ನಿಮ್ಮ ಮನೆಯಲ್ಲಿ ನುಗ್ಗಿ ಬಂದರೆ ನೀವು ಏನು ತಿಳಕೊಳ್ಳುವಿರಿ? ನಿಶ್ಚಯವಾಗಿಯೂ ನೀವು ಅವ ನನ್ನು ಕಳ್ಳನೆಂದು ತಿಳಿಯುವಿರಿ. ಅಲ್ಲದೆ ಕೂಡಲೇ ಹೊರಗಡೆ ಬಂದು ಬಿಡುವಿರಿ.

ಆದರೆ ಹಾತಿಫೀಯು ಘಟನೆಯ ಬಾಹ್ಯಸ್ವರೂಪವನ್ನು ನೋಡಿ ತನ್ನ ತೀರ ಮೊದಲಿನ ಎಣಿಕೆಯಂತೆಯೇ ತನ್ನ ಅಭಿಪ್ರಾಯವನ್ನು ಸ್ಥಿರಗೊಳಿಸ ಲಿಲ್ಲ. ಒಳ್ಳೆಯದು ಮಾಡಿದನು. ಅವನು ತನ್ನ ಹೊಸ ಅತಿಥಿಯನ್ನು

ತೆಂಬ ಸತ್ಕರಿಸಿದನು. ಬಳಿಕ ಕೆಲವು ದಿನಗಳು ಕಳೆದ ಮೇಲೆ ಅದಾವ ಪ್ರಕಾರ ತನ್ನನ್ನು ಕಾಣುವ ಉತ್ಸುಕತೆಯು ಶಹನ ಮನದಲ್ಲಿ ಉಂಟಾಗಿತ್ತೆಂಬ ಘಟನೆಯನ್ನು ಕುರಿತ ಒಂದು ಕವಿತೆಯನ್ನೂ ಅವನು ಬರೆದನು.

ಸಾಧಾರಣವಾಗಿ ಅನ್ಯಗರ ಅವಗುಣವನ್ನು ನೋಡುವುದು ಹೆಚ್ಚು ಸುಲಭವಾಗುತ್ತದೆ. ಪ್ರತಿಯೊಬ್ಬ ಮನುಷ್ಯನಲ್ಲಿ ಒಂದಿಲ್ಲೊಂದು ದೋಷ ವಿದ್ದೇ ಇರುತ್ತದೆ. ಹಾಗೂ ತನಗಿಂತ ಹೆರವರು ಅದನ್ನು ತೀವ್ರವಾಗಿ ತಿಳ ಕೊಳ್ಳುತ್ತಾರೆ. ಆದರೆ ನಾವು ಹೆರರ ವಿಷಯದಲ್ಲಿ ತೀರಕಡಿಮೆ ಅನ್ಯಾಯು ಮಾಡಬೇಕೆಂದು ಇಚ್ಛಿಸಿದರೆ, ನಾವು ಅವರ ಸರ್ವೋತ್ತಮ ಗುಣಗಳನ್ನು ನೋಡುವ ಪ್ರಯತ್ನ ಮಾಡತಕ್ಕದ್ದು. ಒಂದು ಲೋಕೋಕ್ತಿಯಿದೆ—

"ನಿನ್ನ ಗೆಳೆಯನು ಒಕ್ಕಣ್ಣನಿದ್ದರೆ ಅವನ ಮುಖವನ್ನು ಒಮ್ಮಗ್ಗುಲಿ ನಿಂದ ನೋಡು."

ನಿಮಗೆ ಅಗಡಾಗಿಯೂ ಮಂದನಾಗಿಯೂ ಕಂಡುಬರುವ ನಿಮ್ಮ ಸಹಪಾಠಿಯು ಸಹ ವಾಸ್ತವದಲ್ಲಿ ಎಲ್ಲರಿಗಿಂತ ಹೆಚ್ಚು ಪರಿಶ್ರಮಿಯಾಗ ಬಲ್ಲನು.

ಅನುಶಾಸನ ಪ್ರಿಯನೂ ಕಠೋರನೂ ಎಂದು ತೋರುವ ನಿಮ್ಮ ಅಧ್ಯಾಪಕರು ನಿಶ್ಚಯವಾಗಿಯೂ ನಿಮ್ಮನ್ನು ಪ್ರೇಮಿಸುತ್ತಾರಲ್ಲದೆ ಕೇವಲ ನಿಮ್ಮ ಉನ್ನತಿಯನ್ನೇ ಅವರು ಇಚ್ಛಿಸುತ್ತಾರೆ.

ಅರುಚಿಕರನಾಗಿಯೂ ಮೂರ್ಖನಾಗಿಯೂ ಕಾಣಿಸಿಕೊಳ್ಳುವ ನಿಮ್ಮ ಆ ಮಿತ್ರನು ನಿಮಗೆ ಎಲ್ಲರಿಗಿಂತ ಹೆಚ್ಚು ಹಿತೈಷಿಯಾಗಬಲ್ಲನು.

ಯಾರನ್ನು ದುಷ್ಟರೆಂದು ತಿಳಿದು ನಾವು ಪ್ರೇಮಿಸುವದಿಲ್ಲವೋ ಅಂಥ ಕೆಲವು ವ್ಯಕ್ತಿಗಳಿರುತ್ತಾರೆ. ಅವರ ಒಳಗೆ ಸಹ ನಾವು ನೋಡಲಿಕ್ಕಾಗದ ಏನಾದರೊಂದು ಗುಣವಿರುತ್ತದೆ.

ಆಗೋಬಿಯೋ ಎಂಬ ಹೆಸರಿನ ನಗರದ ಹತ್ತಿರದ ಹೊಲಗಳಲ್ಲಿಯೂ ಕಾಡಿನಲ್ಲಿಯೂ ಒಂದು ವಿಶಾಲವಾದ ತೋಳನ ಆತಂಕವು ಅದೆಷ್ಟು ಪಸರಿಸಿತ್ತೆಂದರೆ ಅಲ್ಲಿ ಯಾವ ದಾರಿಗನೂ ಹಾದು ಹೋಗುವ ಸಾಹಸ ಮಾಡುತ್ತಿದ್ದಿಲ್ಲ. ಅದು ಅನೇಕ ಮನುಷ್ಯರನ್ನೂ ಪಶುಗಳನ್ನೂ ನಾಶಗೊಳಿಸಿಬಿಟ್ಟಿತ್ತು.

ಕೊನೆಯಲ್ಲಿ ಭದ್ರಪ್ರಕೃತಿಯಾದ ಫ್ರಾಂಸ್ವಾ ಸಾಧುವು ಆ ಭಯಾನಕ ಪಶುವನ್ನು ಎದುರಿಸುವುದಕ್ಕೆ ನಿಶ್ಚಯಿಸಿದನು. ಅವನು ನಗರದಿಂದ ಹೊರ-ವಂಟನು. ಅವನ ಹಿಂದೆ ಪುರುಷರ ಹಾಗೂ ಸ್ತ್ರೀಯರ ಒಂದು ದೊಡ್ಡ ಗುಂಪೇ ಇತ್ತು. ಅವರು ಕಾಡನ್ನು ಸಮೀಪಿಸುತ್ತಲೇ ತೋಳನು ಬಾಯಿ ಕಿಸಿದು ಸಾಧುವಿನ ಕಡೆಗೆ ಪುಟನೆಗೆಯಿತು. ಆದರೆ ಫ್ರಾಂಸ್ವಾನು ಶಾಂತಿ ಪೂರ್ವಕವಾಗಿ ಕೆಲವೊಂದು ಗುಪ್ತ ಪ್ರೇರಣೆ ನಡೆಸಿದ್ದರಿಂದ ತೋಳನು ತಣ್ಣಗಾಗಿ ಅವನ ಚರಣಗಳ ಬಳಿಯಲ್ಲಿ ಅಡ್ಡ ಬಿದ್ದುದನ್ನು ನೋಡಿದರೆ ಯಾವುದೋ ಕುರಿಮರಿ ಇರಬೇಕು.

“ತಮ್ಮಾ, ತೋಳಣ್ಣಾ,” ಎನ್ನುತ್ತ ಫ್ರಾಂಸ್ವಾ ಸಾಧುವು ನುಡಿದನು.— “ನೀನು ಈ ದೇಶಕ್ಕೆ ಬಹಳ ಹಾನಿಯನ್ನುಂಟು ಮಾಡಿರುವಿ. ಕೊಲೆಗಾರನಿಗೆ ಯಾವ ಶಿಕ್ಷೆಯನ್ನು ವಿಧಿಸಬೇಕಾಗುವದೋ ಅದೇ ಶಿಕ್ಷೆಗೆ ನೀನು ಯೋಗ್ಯನಿರುವಿ. ಹಾಗೂ ಜನರೆಲ್ಲ ನಿನ್ನನ್ನು ತಿರಸ್ಕರಿಸುತ್ತಾರೆ. ಆದರೆ ನಿನ್ನ ಹಾಗೂ ಆಗೋಬಿಯೋದ ನನ್ನ ಮಿತ್ರರ ನಡುವೆ ಗೆಳೆತನ ವುಂಟಾಗಿ ಬಿಟ್ಟರೆ ನನಗೆ ಮಹಾ ಸಂತೋಷವಾಗುವದು.”

ತೋಳನು ತನ್ನ ತಲೆ ತೂಗಿ ತನ್ನ ಬಾಲವನ್ನು ಅಲ್ಲಾಡಿಸತೊಡಗಿತು.

ಫ್ರಾಂಸ್ವಾ ಸಾಧುವು ಮತ್ತೂ ನುಡಿದನು— “ತಮ್ಮಾ, ತೋಳಣ್ಣಾ ನಾನು ನಿನಗಾಗಿ ಪ್ರತಿಜ್ಞೆ ಮಾಡುವುದೇನಂದರೆ— ನೀನು ಈ ಜನರೊಡನೆ ಶಾಂತಿಪೂರ್ವಕವಾಗಿ ಇರಲೊಪ್ಪಿದರೆ ಇವರು ನಿನ್ನೊಡನೆ ಸರಿಯಾಗಿ ನಡಕೊಳ್ಳುವರು. ಮತ್ತು ಪ್ರತಿ ದಿವಸ ತಿನ್ನುಣ್ಣುವುದಕ್ಕೂ ಕೊಡುವರು.

ಇಂದಿನಿಂದ ಇವರನ್ನು ಯಾವ ಹಾನಿಗೂ ಈಡು ಮಾಡುವದಿಲ್ಲವೆಂದು ನೀನು ಸಹ ಪ್ರತಿಜ್ಞೆ ಮಾಡು."

ಆವಾಗ ತೋಳನು ತನ್ನ ತಲೆಯನ್ನು ಸಂಪೂರ್ಣವಾಗಿ ಕೊಡಹಿತು. ಹಾಗೂ ತನ್ನ ಎಡಪಂಜರವನ್ನು ಸಾಧುವಿನ ಕೈಯಲ್ಲಿ ಇಟ್ಟುಬಿಟ್ಟಿತು. ಈ ಪ್ರಕಾರ ಸತ್ಯ ಮನಸ್ಸಿನಿಂದ ಇಬ್ಬರಲ್ಲಿ ಒಪ್ಪಂದವಾಗಿ ಹೋಯಿತು.

ಬಳಿಕ ಫ್ರಾಂಸ್ವಾ ತೋಳನನ್ನು ಆಗೋಬಿಯೋದ ವಿಶಾಲವಾದ ರಾಜ ಮಂದಿರದ ಕಡೆಗೆ ತಕ್ಕೊಂಡು ನಡೆದನು. ಅಲ್ಲಿ ನಾಗರಿಕರ ಒಂದು ದೊಡ್ಡ ಗುಂಪಿನ ಎದುರಿಗೆ ತಾನು ನುಡಿದ ವಚನವನ್ನು ಪುನರುಚ್ಚರಿಸಿದನು. ಹಾಗೂ ಅದು ಸಹ ಮತ್ತೊಮ್ಮೆ ತನ್ನ ಪಂಜರವನ್ನು ಸಾಧುವಿನ ಕೈಯಲ್ಲಿ ಹಿಡಿಯ ಕೊಟ್ಟಿತು. ಅದರರ್ಥವೇನಂದರೆ– ಅದು ಭವಿಷ್ಯದಲ್ಲಿ ಸದಾಚಾರಿಯಾಗಿರುವ ಬಗ್ಗೆ ಪ್ರತಿಜ್ಞೆ ಮಾಡುತ್ತದೆ.

ಆ ತೋಳನು ಆ ನಗರದಲ್ಲಿ ಎರಡು ವರುಷಗಳ ವರೆಗೆ ಉಳಿಯಿತು. ಹಾಗೂ ಅದು ಆ ಅವಧಿಯಲ್ಲಿ ಯಾರಿಗೂ ಯಾವ ತೊಂದರೆಯನ್ನೂ ಕೊಡಲಿಲ್ಲ. ನಗರವಾಸಿಗಳು ಅದಕ್ಕಾಗಿ ಪ್ರತಿ ದಿವಸ ತಿನ್ನುಣ್ಣುವುದಕ್ಕೆ ತರುತ್ತಿದ್ದರು. ಅದು ಮುಂದೆ ಮೃತಿ ಹೊಂದಿದಾಗ ಎಲ್ಲರಿಗೂ ದುಃಖ ವಾಯಿತು.

ಆ ತೋಳನು ಅದೆಷ್ಟೇ ಕೆಟ್ಟದೆಂದು ತೋರಲೊಲ್ಲದೇಕೆ, ಅದರ ಒಳಗೆ ಒಂದು ಗುಣವಿತ್ತು. ಫ್ರಾಂಸ್ವಾ ಸಾಧುವು ಅದಕ್ಕೆ 'ತಮ್ಮಾ' ಎಂದು ಕೂಗಿ ಸಂಬೋಧಿಸುವವರೆಗೆ ಯಾವ ವ್ಯಕ್ತಿಯೂ ಆ ಗುಣವನ್ನು ವಾಸ್ತವದಲ್ಲಿ ತಿಳಿದಿರಲಿಲ್ಲ. ಈ ಕಥೆಯಲ್ಲಿ ತೋಳನು ನಿಸ್ಸಂದೇಹವಾಗಿ ಒಂದು ದೊಡ್ಡ ಅಪರಾಧಿಯ ಉದಾಹರಣವನ್ನು ಮುಂದಿರಿಸುತ್ತದೆ. ಅದಕ್ಕಾಗಿ ಅದನ್ನು ಎಲ್ಲ ಜನರು ತಿರಸ್ಕರಿಸುತ್ತಾರೆ. ಆದರೆ ಅದು ನಮಗೆ ತೋರಿಸಿಕೊಡುವದೇ ನಂದರೆ— ಯಾವ ಆಶೆಯೂ ಇಲ್ಲದಿರುವ ಜನರಲ್ಲಿ ಸಹ ದೊಡ್ಡಿತೆಯ ಕೆಲ

ವೊಂದು ಬೀಜಗಳಿರುತ್ತವೆ. ಅವು ಸ್ವಲ್ಪವೇ ಪ್ರೇಮ ಸಿಕ್ಕರೂ ಬಿರಿದು ಮೊಳೆಯುತ್ತವೆ.

ಯಾವ ಕಟ್ಟಿಗೆಯ ಹಲಗೆಯೇ ಇರಲೊಲ್ಲದೇಕೆ, ಅದು ಅದೆಷ್ಟೇ ಹುಳುಕು ಇರಲೊಲ್ಲದೇಕೆ ಅದರಲ್ಲಿ ಒಬ್ಬ ಕುಶಲ ಕಲೆಗಾರನು ಕೆಲವೊಂದು ತಂತುಗಳನ್ನು ಸರಿಯಾದ ಅವಸ್ಥೆಯಲ್ಲಿ ನೋಡಲಾರನು. ಒಬ್ಬ ಅಶಿಕ್ಷಿತ ಕೆಲಸಗಾರನು ಅಜ್ಞಾನ ಅವಹೇಳನದಿಂದಲೂ ಅದನ್ನು ಬಿಸುಟಿಬಿಡುವನು. ಆದರೆ ಒಬ್ಬ ಪ್ರವೀಣನಾದ ಬಡಿಗನು ಅದನ್ನೆತ್ತಿ ತಕ್ಕೊಳ್ಳುವನು. ಮತ್ತು ಯಾವ ಭಾಗವು ಹುಳಿತುಹೋಗಿದೆಯೋ ಅದನ್ನು ತೆಗೆದುಹಾಕಿ ಉಳಿದುದನ್ನು ಎಚ್ಚರಿಕೆಯಿಂದ ಉಚ್ಚುಗೊರಡು ಹೊಡೆದು ನುಣುಪುಗೊಳಿಸಿಕೊಳ್ಳುವನು. ಗಿಡಗಳ ಬಿರುಸು ಗಂಟುಗಳು ಮೂರ್ತಿ ಕೆತ್ತುವ ಕಲೆಗಾರನಿಗೆ ಬಹಳ ಕೆಲಸಕ್ಕೆ ಬರುತ್ತವೆ. ಯಾಕಂದರೆ ಅವುಗಳಲ್ಲಿ ಅವರು ಅತ್ಯಂತ ಆಕರ್ಷಕ ವಾದ ಚಿಕ್ಕಚಿಕ್ಕ ಚಿತ್ರಗಳನ್ನು ಕೆತ್ತಬಲ್ಲರು.

ಗಿಯಾನಾ ಪ್ರದೇಶದ ಜಲವಾಯುಗಳು ಇರೋಪದವರಿಗೆ ತುಂಬ ವಿನಾಶಕಾರಿಯಾಗಿವೆ. ಅಲ್ಲಿ ಶಿಕ್ಷೆ ಹೊಂದಿದವರ ಹಾಗೂ ನಿರ್ವಾಸಿತರ ಸಲುವಾಗಿ ಸೆರೆಮನೆಗಳನ್ನು ರಚಿಸಿದ್ದಾರೆ. ಕೆಲವು ವರುಷಗಳ ಹಿಂದಿನ ಮಾತು — ಅಲ್ಲಿ ಒಂದು ಸಾರೆ ಒಬ್ಬ ಕಾವಲಗಾರನು ತನ್ನ ಕಣ್ಣಾರಿಕೆಯಲ್ಲಿ ಸೆರೆಯಾಳುಗಳ ಒಂದು ಗುಂಪನ್ನು ಕೇನ ಎಂಬ ಹೆಸರಿನ ಸ್ಥಳಕ್ಕೆ ತೆಗೆದು ಕೊಂಡು ಹೋಗುತ್ತಿದ್ದನು. ಕರಾವಳಿಯ ಸಮೀಪದಲ್ಲಿ ಒಮ್ಮಿಂದೊಮ್ಮೆ ತೆರೆಗಳು ದಂಡೆಯ ಕಡೆಗೆ ಮುನ್ನುಗ್ಗುತ್ತ ಬರುತ್ತಿರುವಾಗ ಆ ನೀರಿನಲ್ಲಿ ಉರುಳಿಬಿದ್ದನು.

ಆ ಬಂದರದಲ್ಲಿ ತೆರೆಗಳ ಇಳುಮೆಯ ಸಮಯದಲ್ಲಿ ಅದೆಷ್ಟು ಉಸುಕು ತುಂಬಿಬಿಡುತ್ತಿದ್ದಿತೆಂದರೆ ನಾವೆಯನ್ನು ಅಲ್ಲಿ ನಿಲ್ಲಿಸುವುದು ಸರ್ವಥಾ

ಅಸಂಭವವಾಗುತ್ತಿತ್ತು. ಇದಕ್ಕೆ ವಿಪರೀತವಾಗಿ ಭರತಿಯ ಸಮಯದಲ್ಲಿ ನೀರಿನ ವೇಗವುಳ್ಳ ಪ್ರವಾಹದೊಂದಿಗೆ ಮೀನುಗಳು ಒಂದು ದೊಡ್ಡ ಸಂಖ್ಯೆಯಲ್ಲಿ ಬಂದು ಸರ್ವ ಕರಾವಳಿಯನ್ನು ಸುತ್ತುವರಿಯುವವು.

ನೀರಿನಲ್ಲಿ ಬಿದ್ದ ಆ ಕಾವಲುಗಾರನ ಅವಸ್ಥೆಯು ಅತ್ಯಂತ ಚಿಂತಾಜನಕವಾಗಿ ಬಿಟ್ಟಿತ್ತು. ಯಾಕಂದರೆ ಈಸುವುದು ಸಹ ಅವನಿಗೆ ಹೆಸರಿನ ಮಟ್ಟಿಗೆ ಬರುತ್ತಿತ್ತು. ಹಾಗೂ ಕ್ಷಣಕ್ಷಣಕ್ಕೂ ಹಿಂಸಕ ಜಂತುಗಳು ತನ್ನನ್ನು ನುಂಗಿಬಿಡುವವೆಂಬ ಭಯವು ಹೆಚ್ಚಾಗತೊಡಗಿತು. ಆಗಲೂ ಯಾವುದೋ ಕೋಮಲ ಭಾವನೆಯಿಂದ ಪ್ರೇರಿತನಾಗಿ ಒಬ್ಬ ಸೆರೆಯಾಳು ನೀರಿನಲ್ಲಿ ಜಿಗಿದುಕೊಂಡನು. ಅವನು ಆ ಕಾವಲುಗಾರನನ್ನು ಹಿಡಿಯುವುದರಲ್ಲಿ ಸಫಲವಾಗಿಬಿಟ್ಟನಲ್ಲದೆ ಯಥೇಷ್ಟವಾಗಿ ಪ್ರಯತ್ನಿಸಿದ್ದರಿಂದ ಅವನು ಕಾವಲುಗಾರನನ್ನು ಬದುಕಿಸಲೂ ಸಮರ್ಥನಾದನು.

ಆ ಮನುಷ್ಯನು ಒಬ್ಬ ಅಪರಾಧಿ. ಎಂಥ ಅಪರಾಧಿಯೆಂದರೆ– ಯಾವುದಾವರೊಂದು ದಾರಿಯಲ್ಲಿ ನಡೆದಾಗ ಅವನನ್ನು ಸೆರೆಯಾಳಿನ ಉಡುಪಿನಲ್ಲಿ ನಂಬರ್ ಹಾಗೂ ಚಿಹ್ನ ಸಹಿತ ನೋಡಿದವರು ತಿರಸ್ಕಾರದಿಂದ ಮುಖ ತಿರುಗಿಸುವರು. ಅವನ ಮಟ್ಟಿಗೆ ಅವನ ಯಾವ ಹೆಸರೂ ಉಳಿದಿರುವುದಿಲ್ಲ. ಆ ನಂಬರೇ ಅವನ ಹೆಸರು. ಹಾಗೂ ಅವನು ಒಂದು ಕೃಪಾಪೂರ್ಣ ದೃಷ್ಟಿಗಾಗಲಿ ದಯಾ-ಪೂರ್ಣವಾದ ಶಬ್ದಕ್ಕಾಗಲಿ ಪಾತ್ರನಾಗಿರಲಿಲ್ಲ. ಆದರೆ ಈ ವಿಚಾರವನ್ನು ನಾವು ನ್ಯಾಯಯುಕ್ತವೆಂದು ಹೇಳಲಾರೆವು. ಯಾಕಂದರೆ ಅವನಲ್ಲಿ ಸಹ ದಯೆಯೆಂಬ ಹೆಸರಿನ ವಸ್ತುವು ವಾಸಿಸಿಕೊಂಡಿತ್ತು. ಅಸಂಖ್ಯ ದೋಷಗಳಾಗುತ್ತಿದ್ದರೂ ಅವನ ಹೃದಯವು ಕೋಮಲವಾಗಿತ್ತು. ಅವನು ತನ್ನ ಜೀವವನ್ನು ಸಹ ಗಂಡಾಂತರದಲ್ಲಿ ಹಾಕಿದ್ದು ಯಾರ ಸಲುವಾಗಿ? ಗೊತ್ತಿದೆಯೇ? ತನ್ನ ಕರ್ತವ್ಯಪಾಲನದ ಉದ್ದೇಶದಿಂದ ತನ್ನೊಡನೆ ಯಾರು ನಿರಂತರವಾಗಿ ಕಠೋರತೆಯಿಂದ ವರ್ತಿಸುತ್ತಿದ್ದರೋ ಆ ಮನುಷ್ಯನಸಲುವಾಗಿ!

ಅಪರಾಧಿಗಳ ಇನ್ನೊಂದು ಕಥೆಯೂ ಆದೆ. ಅದರಿಂದ ನಮಗೆ ಕಂಡು ಬರುವುದೇನಂದರೆ— ಮನುಷ್ಯನ ಬಾಹ್ಯಸ್ವರೂಪವನ್ನು ನೋಡಿ ನಾವು ನಮ್ಮ ಅಭಿಪ್ರಾಯವನ್ನು ನಿಶ್ಚಯಿಸಿದರೆ ಅದೆಷ್ಟೋ ವಂಚನೆಗೀಡಾಗ ಬೇಕಾಗುತ್ತದೆ.

ಸೆರೆಮನೆಯಿಂದ ಬಿಡುಗಡೆಹೊಂದಿದ ಬಳಿಕ ಇಬ್ಬರು ಸೆರೆಯಾಳುಗಳು ಓಮಾರೋನಿ ಎಂಬ ಸ್ಥಳಕ್ಕೆ ಕಚ್ಚಾ ಬಂಗಾರದ ಒಬ್ಬ ವ್ಯಾಪಾರಿಯ ಬಳಿ ಯಲ್ಲಿ ನೌಕರರಾಗಿ ಬಿಟ್ಟರು. ವ್ಯಾಪಾರಿಯು ಇವರನ್ನು ವಿಶ್ವಾಸಿಕರೆಂದು ಎಣಿಸಿ ವರ್ಷಾನುವರ್ಷ ಬಂಗಾರ ತೊಳೆಯುವಿಕೆಯನ್ನೂ ಬಂಗಾರ ಬುಟ್ಟಿ ಯನ್ನೂ ಅವರಿಗೆ ಒಪ್ಪಿಸುತ್ತಿದ್ದನು. ಅವರೂ ಅವನ ಬಳಿಯಿಂದ ಬಂಗಾರ ವನ್ನು ಪೇಟೆಯಲ್ಲಿ ಮಾರುವ ಸಲುವಾಗಿ ತೆಗೆದುಕೊಂಡು ಹೋಗುತ್ತಿದ್ದರು. ಆದರೆ ಅವರ ಹತ್ತಿರದ ಪೇಟೆಯು ಸಹ ಅದೆಷ್ಟು ದೂರವಿದ್ದಿತೆಂದರೆ ಅಲ್ಲಿಗೆ ತಲುಪುವುದಕ್ಕೆ ಮೂವತ್ತು ದಿನಗಳು ಬೇಕಾಗುತ್ತಿದ್ದವು. ನದಿಯ ಪ್ರವಾಹ ದಲ್ಲಿ ನಾವೆಯೊಡನೆ ಹೋಗಬೇಕಾಗುತ್ತಿತ್ತು. ಒಂದು ದಿನ ಆ ಇಬ್ಬರೂ ಬಿಡುಗಡೆಹೊಂದಿದ ಸೆರೆಯಾಳುಗಳು ಓಡಿ ಹೋಗಬೇಕೆಂದು ನಿರ್ಧರಿಸಿದರು. ಯಾಕಂದರೆ ಅಲ್ಲಿ ಸೆರೆಯಾಳುಗಳಿಗೆ ತಮ್ಮ ಶಿಕ್ಷೆಯನ್ನು ಭೋಗಿಸಿದರೂ ಮರಳಿ ತಮ್ಮ ಮನೆಗೆ ಹೋಗುವ ಸ್ವತಂತ್ರತೆ ಇರಲಿಲ್ಲ. ಅವರು ಅದೇ ಪ್ರಾಯಶ್ಚಿತ್ತ ಗೃಹಗಳಲ್ಲಿ ಒಮ್ಮೊಮ್ಮೆ ಇಡಿಯ ಜೀವನವೂ ಇರಬೇಕಾಗು ತ್ತಿತ್ತು. ಆ ಪ್ರದೇಶವೂ ಗಿಯಾನಾದಂತೆಯೇ ಬರಡುಬಂಜರವಾಗಿತ್ತು. ಹಾಗೂ ಅಲ್ಲಲ್ಲಿ ಅದೆಷ್ಟು ನಿಬಿಡವಾದ ಅರಣ್ಯವೂ ಕೆಸರು ಭೂಮಿಯೂ ಇದ್ದಿತೆಂದರೆ ಜನರಿಗೆ ಅಲ್ಲಿ ಯಾವಾಗಲೂ ಹಸಿವೆಯಿಂದಲೂ ಜ್ವರದಿಂದಲೂ ಸಾಯುವ ಅಂಜಿಕೆ ಹತ್ತಿರುತ್ತಿತ್ತು. ಅವರೊಳಗಿಂದ ಹೆಚ್ಚು ಜನರು ಸಮಯ ಸಿಕ್ಕುತ್ತಲೆ ಓಡಿಹೋಗುತ್ತಿದ್ದರು.

ವ್ಯಾಪಾರಿಯ ಆ ನೌಕರರು ಸಹ ತಮ್ಮ ಬಳಿಯಲ್ಲಿ ನಾವೆಯಿದು ದನ್ನು ಕಂಡು ಅದರಿಂದ ಲಾಭ ಪಡೆಯಬೇಕೆಂದು ಇಚ್ಛಿಸಿದರು. ಅಂತೂ

ಮುಂದಿನ ಕರಾವಳಿಯಲ್ಲಿರುವ ಹಾಲಂಡದ ಯಾವುದಾದರೂ ಒಕ್ಕಲು ನಾಡಿಗೆ ಓಡಿಹೋಗಬೇಕೆಂದು ಅವರು ನಿಶ್ಚಯಿಸಿದರು.

ಆದರೆ ಇದರಿಂದ ಮೊದಲು ಅವರ ಒಡೆಯನ ಅದೆಷ್ಟು ಬಂಗಾರವು ಅವರ ಬಳಿಯಲ್ಲಿದ್ದಿತೋ ಅದನ್ನು ಅವರೊಂದು ಸ್ಥಳದಲ್ಲಿ ಇಟ್ಟುಬಿಟ್ಟರು. ಹಾಗೂ ವ್ಯಾಪಾರಿಗೆ ಪತ್ರ ಬರೆದು ಆ ಸ್ಥಳದ ಗೊತ್ತನ್ನು ಕಾಣಿಸಿದರು.

ಅವರು ಬರೆದರು— "ತಾವು ನಮ್ಮ ಮೇಲೆ ಯಾವಾಗಲೂ ಕೃಪೆ ಯಿಟ್ಟಿರುತ್ತೀರಿ. ಹೀಗೆ ಓಡಿಹೋಗುವಾಗ, ತಾವು ನಮ್ಮ ಮೇಲೆ ನಂಬಿಗೆ ಯಿಟ್ಟು ನಮಗೆ ಒಪ್ಪಿಸಿದ ಧನದಿಂದ ತಮ್ಮನ್ನು ವಂಚಿತರನ್ನಾಗಿ ಮಾಡು ವಷ್ಟು ಕೃತಘ್ನರು ನಾವಾಗಲಾರೆವು."

ನೆನಪಿರಲಿ— ಆ ಇಬ್ಬರೂ ಸೆರೆಯಾಳುಗಳು ಕಳವು ಸುಲಿಗೆ ಮಾಡಿದ ಕಾರಣದಿಂದ ಶಿಕ್ಷಿಸಲ್ಪಟ್ಟಿದ್ದರು. ಅವರ ಕೈಯಲ್ಲಿದ್ದ ಬಂಗಾರವು ಅದೆಷ್ಟು ಸ್ವಲ್ಪವೇ ಇದ್ದರೂ ಅದು ಅವರ ಕೆಲಸಕ್ಕೆ ಬರಬಲ್ಲದಾಗಿತ್ತು. ಆದರೆ ಅವರ ಒಳಗೆ ಯಾವುದೋ ವಸ್ತುವು ಸತ್ಯತೆ ಹಾಗೂ ಪ್ರಾಮಾಣಿಕತೆ ಆಗಿತ್ತು. ಆ ಜನರ ಸಲುವಾಗಿ ಆ ಯಾವ ಅವರ ಪೂರ್ವ ಇತಿಹಾಸವನ್ನು ತಿಳಿದು ಅದರ ಆಧಾರದ ಮೇಲೆ ತಮ್ಮ ಅಭಿಪ್ರಾಯವನ್ನು ಕಟ್ಟುತ್ತಿದ್ದರೋ ಅವರು ಕುಕರ್ಮಿಗಳೂ ಕಳ್ಳರೂ ಸುಲಿಗೆಗಾರರೂ ಆಗಿದ್ದರು. ಆದರೆ ತಮ್ಮನ್ನು ನಂಬಬಲ್ಲ ವ್ಯಕ್ತಿಗಳ ಸಲುವಾಗಿ ಸರ್ವದೋಷಿಗಳಾಗಿದ್ದರೂ ಅವರು ವಿಶ್ವಾಸ ಪಾತ್ರರಾಗಬಲ್ಲರು.

ಚಿಕ್ಕ ಮಕ್ಕಳೇ, ನಾವು ನಮ್ಮ ವಿಚಾರಗಳಲ್ಲಿ ಉದಾರಿಗಳೂ ದೂರ ದರ್ಶಿಗಳೂ ಆಗಬೇಕು. ನಮ್ಮ ಸಂಗಡಿಗರ ವಿಷಯದಲ್ಲಿ ಯಾವತರದ ಗಡಿಬಿಡಿಯ ಅಭಿಪ್ರಾಯವನ್ನು ನಿಶ್ಚಿತಗೊಳಿಸಿಕೊಳ್ಳುವ ತಪ್ಪಿನಿಂದ ನಾವು ಉಳಿದುಕೊಳ್ಳತಕ್ಕದ್ದು. ಇದನ್ನು ಬಿಟ್ಟರೆ, ಯಾವ ಅಭಿಪ್ರಾಯವನ್ನೂ ನಿಶ್ಚಯಿಸುವುದು ತಕ್ಕದ್ದಲ್ಲವೆನ್ನುವುದು ಎಲ್ಲಕ್ಕಿಂತ ಒಳ್ಳೆಯದು.

# ವ್ಯವಸ್ಥೆ

ಪ್ರಾಚೀನ ಕಾಲದ ಹಿಂದುಗಳು ಜಗತ್ತು ಹಾಗೂ ಅದರ ರಚನೆಯ ವಿಷಯದಲ್ಲಿ ಒಂದು ವಿಚಿತ್ರವಾದ ಕಲ್ಪನೆಯನ್ನು ಇಟ್ಟುಕೊಂಡಿದ್ದರು. ಹಾಗು ಆ ಕಲ್ಪನೆಯ ಆಶಯವು ವ್ಯವಸ್ಥೆಯನ್ನು ನಿರೂಪಿಸುವುದೇ ಆಗಿತ್ತು.

ಮನುಷ್ಯನಿರುತ್ತಿದ್ದ ಭೂಖಂಡಕ್ಕೆ ಜಂಬುದ್ವೀಪವೆಂಬ ಹೆಸರಿತ್ತು. ಅದರ ಸುತ್ತುಮುತ್ತಲು ಸೌಳು ನೀರಿನ ಸಮುದ್ರವಿತ್ತು. ಅದರ ನಾಲ್ಕೂ ನಿಟ್ಟುಗಳಲ್ಲಿ ಪೃಥ್ವಿಯಿತ್ತು. ಅದು ಕ್ಷೀರಸಾಗರದಿಂದ ಸುತ್ತುವರಿಯಲ್ಪಟ್ಟಿತ್ತು. ಬಳಿಕ ಪೃಥ್ವಿ ಹಾಗೂ ಅದರ ಸುತ್ತುಮುತ್ತಲು ನವನೀತದ ಸಮುದ್ರ, ಅದಾದಮೇಲೆ ಮೊದಲಿನಂತೆ ಪೃಥ್ವಿ ಹಾಗೂ ಸಕ್ಕರೆಯ ಸಾಗರ ಇದೇ ಕ್ರಮ. ಏಳನೇದೂ ಕೊನೆಯದೂ ಆದ ಸಮುದ್ರವು ಶುದ್ಧವಾದ ನಿರ್ಮಲ ನೀರಿನದಾಗಿತ್ತು. ಅದು ಬಹಳ ಸಿಹಿಯಾಗಿತ್ತು. ಎಲ್ಲ ಸಾಗರಗಳಿಗಿಂತಲೂ ಸಿಹಿಯಾಗಿತ್ತು.

ಇಂದು ಶಾಲೆಗಳಲ್ಲಿ ಉಪಯೋಗಿಸುತ್ತಿರುವ ಪೃಥ್ವಿಯ ನಕ್ಷೆಯನ್ನು ನೀವು ನೋಡಿದರೆ ನಿಮಗೆ ಅಲ್ಲಿ ಸಕ್ಕರೆಯ ಸಮುದ್ರವು ಸಿಗಲಾರದು. ಹಾಲಿನದೂ ಇಲ್ಲ, ಇನ್ನಾವುದೂ ಇಲ್ಲ. ಈ ಸಾಗರಗಳಿಗೆ ಸತ್ಯಸತ್ಯವಾದ

ಯಾವುದೋ ಅಸ್ತಿತ್ವವದೆಯೆಂದು ಆ ಹಿಂದುಗಳೂ ನಂಬುತ್ತಿದ್ದಿಲ್ಲ. ಇದೊಂದು ಗಹನವಾದ ವಿಚಾರವನ್ನು ತಿಳಕೊಳ್ಳುವ ಒಂದು ಅಮೂಲ್ಯವಾದ ಪದ್ಧತಿ ಯಾಗಿತ್ತು.

ಆ ಪ್ರಾಚೀನ ಕಥೆ ಹಾಗೂ ಬೇರೆ ಸಂಗತಿಗಳು ಕೂಡಿಕೊಂಡೇ ನಮಗೆ ತೋರಿಸಿಕೊಡುವುದೇನಂದರೆ— ಜಗತ್ತಿನಲ್ಲಿ ಸರ್ವ ಕಾರ್ಯಗಳೂ ಯಥಾಸ್ಥಿತ ರೂಪದಲ್ಲಿ ಒಂದು ಕ್ರಮದಿಂದ ಸಾಗುತ್ತವೆ. ಮತ್ತು ಈ ಪೃಥ್ವಿಯ ಮೇಲೆ ಪ್ರತ್ಯೇಕ ವಸ್ತುವು ಸರಿಯಾಗಿ ಅದರ ಸ್ಥಾನದಲ್ಲಿ ಕಾಣಲಾಗುವದಿಲ್ಲವಾದರೂ ಇದೊಂದು ವಿಶ್ರಾಮದಾಯಕವೂ ಉಚಿತವೂ ನಿವಾಸಯೋಗ್ಯವೂ ಆದ ಸ್ಥಳ ವೇದಿಗೂ ಆಗಲಾರದು. ಉಪ್ಪು, ಹಾಲು, ಜೆಣ್ಣೆ, ಸೆರೆ, ಸಕ್ಕರೆ, ನೀರು ಇಲ್ಲವೆ ಇವಾವುವೋ ದೊಡ್ಡ ವಸ್ತುಗಳನ್ನು ಬೇರೆಬೇರೆಯಾಗಿ ಯಾವುದೇ ಒಂದು ಪದ್ಧತಿಯಿಂದ ಇಡದಿದ್ದರೆ, ಇದಕ್ಕೆ ವಿಪರೀತವಾಗಿ ಎಲ್ಲವೂ ಕಲೆಬೆರಕೆ ಯಾಗಿ ಕಿಚಡಿಯಾಗುತ್ತಿದ್ದರೆ ನೀವು ಅದರ ಸವಿಯನ್ನು ಅದೆಂತು ತೆಗೆದು ಕೊಳ್ಳುತ್ತಿದ್ದಿರಿ ?

*　　*　　*　　*

ಮನುಷ್ಯಜಾತಿಯ ಸರ್ವ ಧರ್ಮಪುಸ್ತಕಗಳಲ್ಲಾಗಲಿ ವಿಷಯಗಳ ಲ್ಲಾಗಲಿ ವಿಭಿನ್ನತೆಯಿರುತ್ತಿದ್ದರೂ ಅವು ಒಂದೇ ಸ್ವರದಲ್ಲಿ ವ್ಯವಸ್ಥೆಯ ಪಾಠ ವನ್ನು ಕಲಿಸುತ್ತವೆ.

ಯಹೂದಿಯರ ಪುಸ್ತಕ ( Old Testament ) ದ ಸೃಷ್ಟಿಯ ಉತ್ಪತ್ತಿಯೆಂಬ ಪ್ರಕರಣದಲ್ಲಿ ವ್ಯವಸ್ಥೆಯ ಸಂಬಂಧವಾಗಿ ತನ್ನದೇ ಆದ ಒಂದು ಪದ್ಧತಿಯ ಒಂದು ಕಥೆಯಿದೆ.

ಪ್ರಾರಂಭದಲ್ಲಿ ಎಲ್ಲವೂ ಅಸ್ತವ್ಯಸ್ತವಾಗಿತ್ತು. ಆದರೆ ನಾಲ್ಕೂ ಕಡೆಗೆ ಅವ್ಯವಸ್ಥೆಯ ಹಾಗೂ ಅಂಧಕಾರದ ಸಾಮ್ರಾಜ್ಯವಿತ್ತು. ಈಶ್ವರನು ಆವಾಗ ಮಾಡಿದ ಮೊಟ್ಟಮೊದಲನೆಯ ಕೆಲಸವಾವುದೆಂದರೆ— ಈ ಅವ್ಯವಸ್ಥೆಯ

ಸಾಮ್ರಾಜ್ಯದ ಮೇಲೆ ಪ್ರಕಾಶವನ್ನು ಒಗೆದನು. ಹೇಗೆಂದರೆ– ಯಾವನಾದರೂ ಮನುಷ್ಯನು ಕತ್ತಲೆಯ ಹಾಗೂ ಹೊಲಸು ತುಂಬಿದ ಗವಿಯಲ್ಲಿ ಇಳಿಯು ವಾಗ ಅದರ ಮೇಲೆ ತನ್ನ ದೀಪದ ಬೆಳಕನ್ನು ಬೀರುತ್ತಿರುವಂತೆ.

ಆ ಬಳಿಕ ಅಲ್ಲಿ ಬರೆದ ಪ್ರಕಾರ— ಪ್ರತಿ ನಿತ್ಯವೂ ಸರ್ವ ವಸ್ತುಗಳು ಅನುಕ್ರಮವಾಗಿ ಆ ಅಸ್ತವ್ಯಸ್ತ ಸಾಮ್ರಾಜ್ಯದಿಂದ ಹೊರಬಿದ್ದು ವ್ಯವಸ್ಥಿತ ರೂಪದಲ್ಲಿ ಪ್ರಕಟವಾಗತೊಡಗಿದವು. ಕೊನೆಯಲ್ಲಿ ಮನುಷ್ಯಜಾತಿ ನಿರ್ಮಾಣ ವಾಯಿತು.

ವ್ಯವಸ್ಥೆಯನ್ನು ನಿರ್ಮಾಣ ಮಾಡಿದ ಹಾಗೂ ಅದನ್ನು ಸರ್ವತ್ರ ಪ್ರಕೃತಿಯಲ್ಲಿ ಹುಡುಕಿ ತೆಗೆದ ಯಶಸ್ಸು ಮನುಷ್ಯನಿಗೇ ಸಿಕ್ಕಿದೆ.

ಜ್ಯೋತಿರ್ವಿದರು ನಕ್ಷತ್ರಗಳ ಕಡೆಗೆ ಕಣ್ಣಿತ್ತಿ ನೋಡುತ್ತಿರುತ್ತಾರೆ. ಹಾಗೂ ಆಕಾಶದ ನಕ್ಷೆಯನ್ನು ರಚಿಸುತ್ತಾರೆ. ಅವರು ನಕ್ಷತ್ರಗಳ ಮಾರ್ಗ ಗಳನ್ನು ಅಭ್ಯಸಿಸುತ್ತಾರೆ. ಅವುಗಳಿಗೆ ಹೆಸರು ಕೊಡುತ್ತಾರಲ್ಲದೆ ಸೂರ್ಯನ ಸುತ್ತಲು ಗ್ರಹಗಳು ತಿರುಗುವ ಲೆಕ್ಕವಿಡುತ್ತಾರೆ. ಅವರಿಗೆ ಮುಂಚಿತ ವಾಗಿಯೇ ತಿಳಿದುಬಿಡುವುದೇನಂದರೆ– ಯಾವ ಸಮಯಕ್ಕೆ ಚಂದ್ರನು ಪೃಥ್ವಿ ಹಾಗೂ ಅಗ್ನಿಗೋಲಕವಾದ ಸೂರ್ಯನ ನಡುವೆ ಬಂದು ಪೃಥ್ವಿಯ ನೆರಳನ್ನು ಗ್ರಹಣ ಮಾಡುವನು, ಅಂದರೆ ಚಂದ್ರಗ್ರಹಣವಾಗುವದು ? ಸರ್ವ ಜ್ಯೋತಿಷ ವಿಜ್ಞಾನವೂ ವ್ಯವಸ್ಥಾಜ್ಞಾನವನ್ನೇ ಅವಲಂಬಿಸಿದೆ.

ಗಣಿತ ವಿದ್ಯೆಯೂ ವ್ಯವಸ್ಥಾಜ್ಞಾನವೇ ಆಗಿದೆ. ಒಬ್ಬ ತೀರ ಚಿಕ್ಕ ಬಾಲಕನು ಸಹ ಸರಿಯಾದ ಕ್ರಮದಲ್ಲಿಯೇ ಅಂಕಿಗಳನ್ನು ಎಣಿಸುವುದನ್ನು ಒಪ್ಪಿಕೊಳ್ಳುತ್ತಾನೆ. ಅವನಿಗೆ ಶೀಘ್ರವಾಗಿಯೇ ಯಾವ ಮಾತಿನ ತಿಳುವಳಿಕೆ ಯಾಗಿಬಿಡುವುದೆಂದರೆ– ಒಂದು, ಐದು, ಮೂರು, ಹತ್ತು, ಎರಡು ಹೀಗನ್ನು ವುದರಲ್ಲಿ ಯಾವ ಅರ್ಥವೂ ಇಲ್ಲ. ಅವನು ಬೆರಳುಗಳ ಮೇಲೆ ಎಣಿಸಲಿ

ಇಲ್ಲವೆ ಕಾಜಿನ ಗುಂಡುಗಳಿಂದ ಎಣಿಸಲಿ. ಅವನು ಒಂದು ಎರಡು ಮೂರು ನಾಲ್ಕು ಹೀಗೆಯೇ ಎಣಿಸುವನು. ಸರ್ವ ಶಾಸ್ತ್ರಗಳೂ ಈ ಕ್ರಮದಿಂದಲೇ ಹೊರಡುತ್ತವೆ.

ಕ್ರಮ ಹಾಗೂ ವ್ಯವಸ್ಥೆಗಳು ಇಲ್ಲದಿದ್ದರೆ ಆ ಗಾನವಿದ್ಯೆಯುಂಥ ಸುಂದರ ವಸ್ತುವಿನ ಸ್ವರೂಪವೇನಾದೀತು ? ತೆರೆಯುಲ್ಲಿ ಏಳು ಸ್ವರಗಳಿವೆ.— ಸಾ, ರೆ, ಗಾ, ಮ, ಪ, ಧ, ನಿ! ನೀವು ಈ ಸ್ವರಗಳನ್ನು ಒಂದಾದ ಬಳಿಕ ಒಂದು ಬಾರಿಸಿದರೆ ಎಲ್ಲವೂ ಸರಿಯಾಗಿ ಸಾಗುವದು. ಆದರೆ ನೀವು ಎಲ್ಲವನ್ನೂ ಒಮ್ಮೆಲೆ ಒತ್ತಿ ಹಿಡಿದು ಅವೆಲ್ಲವುಗಳ ಒಂದು ಸ್ವರವನ್ನು ಮಾಡಿದರೆ ಅದು ಏನಾದೀತು— ಕೇವಲ ಒಂದು ವಿಕಟ ಕೋಲಾಹಲ. ಕೂಡಿಕೊಂಡರೆ ಅವು ಆಗಲೂ ಒಂದು ಅಪಸ್ವರ ಹೊರಡಬಲ್ಲದು. ಆದರೆ ಆದರಲ್ಲಿ ಯಾವ ಪ್ರಕಾರದ ಕ್ರಮವಿರುವದು ? ಉದಾಹರಣಾರ್ಥವಾಗಿ ಸಾ, ಗ, ಪ, ಸಾ ಒಟ್ಟಿಗೆ ಬಾರಿಸಿದಾಗ ನಾವು ಪೂರ್ಣ ಸ್ವರವೆನ್ನುವ ಒಂದು ಸ್ವರವು ಹೊರಡುತ್ತದೆ.

ಮನುಷ್ಯನಿರ್ಮಿತವಾದ ಸರ್ವ ಜ್ಞಾನಗಳಿಗೂ ಕಲೆಗಳಿಗೂ ಆಧಾರ ವೆಂದರೆ ವ್ಯವಸ್ಥೆಯೇ ಎಂದು ನಾವು ಸಿದ್ಧಗೊಳಿಸಬಲ್ಲೆವು.

* * * *

ಆದರೆ ಸರ್ವ ವಸ್ತುಗಳಲ್ಲಿಯೂ ವ್ಯವಸ್ಥೆಯು ಅಷ್ಟೇ ಆವಶ್ಯಕ ವಾಗಿಲ್ಲವೇ ?

ನೀವು ಒಂದಾನೊಂದು ಮನೆಯನ್ನು ಪ್ರವೇಶಿಸಿರಿ. ಅಲ್ಲಿ ಮನೆಯವಳ ಸರ್ವಸಜ್ಜು ವೊಡವೆಗಳು ಸಣ್ಣದೊಡ್ಡ ವಸ್ತುಗಳು ಅತ್ತ ಇತ್ತ ಮೂಲೆಯಲ್ಲಿ ಚಲ್ಲಾಪಿಲ್ಲಿಯಾಗಿಬಿದ್ದಿವೆ. ಹಾಗೂ ಅವುಗಳ ಮೇಲೆ ಹುಡಿಮಣ್ಣಿನ ಒಂದು ದಪ್ಪ ಥರವೇ ಕುಳಿತುಬಿಟ್ಟಿದೆ. ನೀವು ಒಮ್ಮೆಲೆ ಗೊಣಗುಟ್ಟುವಿರಿ— " ಇದೆಂಥ ಕೆಟ್ಟ ಪದ್ಧತಿಯಿದು ! ಎಷ್ಟು ಹೊಲಸು!" ಯಾಕಂದರೆ ಹೊಲಸು ಹಾಗೂ ಅವ್ಯವಸ್ಥೆ ಎರಡೂ ಒಂದೇ.

ಈ ಜಗತ್ತು ಹುಡಿಮಣ್ಣಿನ ಸ್ಥಳವೇ ಆಗಿದ್ದರೂ ಆ ಸ್ಥಳವು ಈ ವಸ್ತುಗಳ ಮೇಲಿಲ್ಲ.

ಪ್ರತಿಯೊಂದು ವಸ್ತುವು ತನ್ನ ಸ್ಥಳದಲ್ಲಿದ್ದಾಗಲೇ ಎಲ್ಲ ಕೆಲಸಗಳೂ ಸರಿಯಾಗಿ ಸಾಗುತ್ತವೆ.

ವ್ಯವಸ್ಥೆಯನ್ನು ಕಲಿಯುವ ಸಲುವಾಗಿ ಆರಂಭದಲ್ಲಿ ತುಸು ಕಷ್ಟವನ್ನೇ ಸಹಿಸಬೇಕಾಗುತ್ತದೆ. ಪರಿಶ್ರಮವಿಲ್ಲದೆ ಏನನ್ನೂ ಕಲಿಯಲಿಕ್ಕಾಗುವದಿಲ್ಲ. ಈಸುವುದು, ನಾವೆ ನಡಿಸುವುದು, ಕುಸ್ತಿಯಾಡುವುದು ಇವುಗಳನ್ನು ಕಲಿಯುವುದು ಅಷ್ಟೊಂದು ಸರಳವಲ್ಲ. ಮನುಷ್ಯನು ಮೆಲ್ಲಮೆಲ್ಲನೆಯೇ ಇವನ್ನು ಕಲಿತುಕೊಳ್ಳುತ್ತಾನೆ. ಕೆಲವೊಂದು ಸಮಯದ ತರುವಾಯವೇ ನಾವು ನಮ್ಮ ಕಾರ್ಯವನ್ನು ನಿಯಮಿತ ಪದ್ಧತಿಯಿಂದ ಹಾಗೂ ಏನಿಲ್ಲೆಂದರೂ ಕಡಿಮೆ ಕಷ್ಟದಿಂದ ಮಾಡುವುದನ್ನು ಕಲಿಯಬಲ್ಲೆವು. ಹಾಗೂ ಕೊನೆಯಲ್ಲಿ ನಮಗೆ ಅವ್ಯವಸ್ಥೆಯು ಅರುಚಿಕರವಾಗಿಯೂ ದುಃಖದಾಯಿಯಾಗಿಯೂ ಅನಿಸತೊಡಗುತ್ತದೆ.

ಮೊಟ್ಟಮೊದಲು ನೀವು ನಡೆಯಲಿಕ್ಕೆ ಕಲಿತಾಗ ಅದರಲ್ಲಿ ಕೆಲವು ತಪ್ಪುಗಳಿದ್ದವು. ನೀವು ಬಿದ್ದಿರಿ. ನಿಮಗೆ ಪೆಟ್ಟು ಹತ್ತಿತು. ಹಾಗೂ ನೀವು ಅತ್ತುಬಿಟ್ಟಿರಿ. ಈಗ ನೀವು ಆ ಕಡೆಗೆ ಲಕ್ಷ್ಯವಿಡದೆಯೂ ನಡೆದಾಡುತ್ತೀರಿ. ನಿಪುಣತೆಯಿಂದ ಓಡಾಡುತ್ತೀರಿ. ನಡೆದಾಡುವ ಹಾಗೂ ಓಡಾಡುವ ನಿಮ್ಮ ಕ್ರಿಯೆಯುಸಹ ವ್ಯವಸ್ಥೆಯ ಒಂದು ದೊಡ್ಡ ಮಿಶ್ರಣವಾಗಿದೆ. ನಿಮ್ಮಮೂಗು ನಿಮ್ಮ ಸಿರ್ರೆ, ಹಾಗೂ ನಿಮ್ಮ ಸರ್ವಾಂಗಗಳು ಒಂದು ನಿಯಮಿತ ಪದ್ಧತಿಯಿಂದಲೇ ಕೆಲಸ ಮಾಡುತ್ತವೆ.

ಈ ಪ್ರಕಾರವಾಗಿ ವ್ಯವಸ್ಥಿತ ಪದ್ಧತಿಯಿಂದ ಮಾಡಲಾದ ಕೆಲಸವು ಕಡೆಯಲ್ಲಿ ಸ್ವಭಾವವಾಗಿ ಬಿಡುತ್ತದೆ.

ನಿಯಮಿತ ಪದ್ಧತಿಯಿಂದ ಹಾಗೂ ಸಕಾಲಕ್ಕೆ ಕೆಲಸ ಮಾಡುವುದರಿಂದ ನೀವು ಸಂತುಷ್ಟರಾಗಿರುವದಿಲ್ಲವೆಂದಾಗಲಿ ನಗಲಾರಿರೆಂದಾಗಲಿ ಎಂದೂ ಎಣಿಸಬೇಡಿರಿ. ನಿಮ್ಮ ಯಾವ ಕೆಲಸವನ್ನಾದರೂ ವಿಧಿಪೂರ್ವಕವಾಗಿ ಮಾಡುತ್ತಿದ್ದರೆ ಅದಕ್ಕಾಗಿ ನಿಮ್ಮ ಮುಖವನ್ನು ಗಂಭೀರ ಹಾಗೂ ಸಪ್ಪಗೆ ಮಾಡಿಕೊಳ್ಳುವ ಅವಶ್ಯಕತೆಯಿಲ್ಲ. ಆದಕಾರಣ ವ್ಯವಸ್ಥೆಯೆಂಬ ವಿಷಯಕ್ಕೆ ಸಂಬಂಧಿಸಿದ ಈ ಲೇಖನವನ್ನು ನಾವು ಒಂದು ಸೊಗಸಾದ ಪ್ರಸಂಗದಿಂದ ಮುಗಿಸಬೇಕೆನ್ನುವೆವು.

ಅರಬಸ್ತಾನದ ಒಬ್ಬ ಸ್ತ್ರೀಯಳ ಹತ್ತಿರ ಒಬ್ಬ ನೌಕರನಿದ್ದನು ನೆರೆಮನೆಯಿಂದ ಬೆಂಕಿಯನ್ನು ತರುವ ಸಲುವಾಗಿ ಅವಳು ಅವನನ್ನು ಕಳಿಸಿದಳು. ನೌಕರನಿಗೆ ದಾರಿಯಲ್ಲಿ ಮಿಶ್ರದೇಶಕ್ಕೆ ಹೊರಟ ಒಂದು ಪ್ರಯಾಣಿಕರ ಗುಂಪು ಕೂಡಿತು. ಕೆಲಹೊತ್ತು ಅವನು ಅವರೊಡನೆ ಹೊರಟುಹೋಗುವ ನಿಶ್ಚಯ ಮಾಡಿಕೊಂಡನು. ಅವನು ಸಂಪೂರ್ಣ ಒಂದು ವರುಷ ಅಲ್ಲಿಂದ ಹೋಗಿಬಿಟ್ಟನು.

ಪ್ರಯಾಣಿಕರೊಡನೆ ಅವನು ತಿರುಗಿ ಅಲ್ಲಿಗೆ ಬಂದು ತನ್ನ ಒಡೆಯಳ ಅಪ್ಪಣೆಯಂತೆ ಅವನು ನೆರೆಮನೆಗೆ ಬೆಂಕಿ ಕೇಳಲು ಹೋದನು. ಅಲ್ಲಿಂದ ಅವನು ಉರಿಯುತ್ತಿರುವ ಇದ್ದಲಿ ತರುತ್ತಿದ್ದನು. ಆದರೆ ಅವನಿಗೆ ದಾರಿಯಲ್ಲಿ ಏನೋ ತಟ್ಟಿ ಎಡವಿಬಿದ್ದನು. ಕೂಡಲೇ ಅವನ ಕೈಯೊಳಗಿಂದ ಇದ್ದಲಿಯೂ ಕಳಚಿಬಿತ್ತು. ಹಾಗೂ ಅದು ನಂದಿಹೋಯಿತು. ಆಗ ಅವನು ಗೊಣಗಹತ್ತಿದನು—

" ಗಡಿಬಿಡಿಯು ಅದೆಷ್ಟು ಕೆಟ್ಟ ವಸ್ತು ! "



## ೧೧

# ಮಾಡುವುದು ಮತ್ತು ಮುರಿಯುವುದು



ಬಾಲಕರೇ, ಮಾಡುವುದು ಮತ್ತು ಮುರಿಯುವುದು ಎಂದರೇನೆಂಬುದನ್ನು ನೀವು ಬಲ್ಲಿರಷ್ಟೇ?

ಒಬ್ಬ ಸೈನಿಕನು ಕೈಯಲ್ಲಿ ಶಸ್ತ್ರವನ್ನು ತಕ್ಕೊಂಡು ಮುರಿಯಲಿಕ್ಕೆ ಅಂದರೆ ಯಾರನ್ನಾದರೂ ನಾಶಗೊಳಿಸುವುದಕ್ಕೆ ಹೋಗುತ್ತಾನೆ.

ಒಬ್ಬ ಕಟ್ಟಿಗನು ನಕಾಶೆ ಮಾಡಿಕೊಂಡು ತಳಹದಿಯನ್ನು ಅಗಿಯುತ್ತಾನೆ. ಅಲ್ಲದೆ ಮನುಷ್ಯನ ಪರಿಶ್ರಮಿಯಾದ ಕೈಯು ಒಕ್ಕಲಿಗನ ಸಲುವಾಗಿ ಗುಡಿಸಲವನ್ನೂ ರಾಜನ ಸಲುವಾಗಿ ಅರಮನೆಯನ್ನೂ ಕಟ್ಟಿಕೊಡುತ್ತದೆ.

ಮುರಿಯುವುದಕ್ಕಿಂತ ಮಾಡುವುದು ಒಳ್ಳೆಯದಾದರೂ ಒಮ್ಮೊಮ್ಮೆ ಮುರಿಯುವುದೂ ಆವಶ್ಯಕವಾಗಿ ಬಿಡುತ್ತದೆ.

ಬಾಲಕರೇ, ನಿಮ್ಮ ಬಾಹುಗಳೂ, ಕೈಗಳೂ ತುಂಬ ಬಲಿಷ್ಠವಾಗಿವೆ. ನೀವು ಕೇವಲ ನಿರ್ಮಾಣವನ್ನೇ ಮಾಡುವಿರಾ? ಎಂದೂ ಮುರಿಯುವ

ದಿಲ್ಲವೇ ? ಮತ್ತು ಎಂದಾದರೂ ಹಾಗೆ ಮಾಡಿದ್ದಿರಾದರೆ ಯಾವುದನ್ನು ಮುರಿಯುವಿರಿ ? ಯಾವುದನ್ನು ನಾಶಗೊಳಿಸುವಿರಿ ?

ದಕ್ಷಿಣ ಭಾರತದ ಹಿಂದುಗಳಲ್ಲಿ ಒಂದು ಪ್ರಾಚೀನ ಕಥೆಯಿದೆ.

ಒಂದು ನವಜಾತ ಶಿಶುವು ಒಮ್ಮೆ ಮರಗಳ ಒಂದು ಗುಂಬರಿನ ಬಿದ್ದುಕೊಂಡಿತ್ತು. ಅದು ಅಲ್ಲಿ ಬಿದ್ದುಬಿದ್ದುಕೊಂಡೇ ಸತ್ತುಹೋಗಿರ ಬಹುದೆಂದು ನೀವು ಎಣಿಸಬಲ್ಲಿರಿ. ಯಾಕಂದರೆ ಅದರ ತಾಯಿಯು ಅದನ್ನು ಅಲ್ಲಿ ಬಿಟ್ಟುಹೋಗಿದ್ದಳು. ಹಾಗೂ ಅದನ್ನು ತಿರುಗಿ ತೆಗೆದುಕೊಂಡು ಹೋಗುವ ವಿಚಾರವೇನೂ ಅವಳಿಗಿರಲಿಲ್ಲ. ಏನಾಯಿತು ಬಲ್ಲಿರಾ ? ಯಾವ ವೃಕ್ಷದ ಕೆಳಗೆ ಅದು ಬಿದ್ದಿದ್ದಿತೋ ಅದು ಹ್ಯಾಪ್ಪೈಲ ಎಂಬ ಹೆಸರಿನ ಒಂದು ವಿಶೇಷ ಪ್ರಕಾರದ ವೃಕ್ಷವಿತ್ತು. ಅದರ ಸುಂದರವಾದ ಹೂಗಳಿಂದ ಜೇನಿನಂತಹ ಸಿಹಿಯಾದ ಹನಿಗಳು ತಟತಟನೆ ಅವರ ಬಾಯಲ್ಲಿ ಬೀಳುತ್ತಿದ್ದವು. ಹಾಗೂ ಆ ಪ್ರಕಾರ ಅದರ ಜೋಪಾನವಾಗತೊಡಗಿತು. ಕಡೆಗೆ ಒಬ್ಬ ಸ್ತ್ರೀಯು ಅದನ್ನು ನೋಡಿದಳು. ಅವಳು ಶಿವಾಲಯದಲ್ಲಿ ಪೂಜೆ ಮಾಡುವ ಸಲುವಾಗಿ ಬಂದಿದ್ದಳು. ಅವಳ ಹೃದಯವು ಶಿಶುವನ್ನು ನೋಡಿ ಕರಗಿ ಹೋಯಿತು. ಅದನ್ನು ಮಡಿಲಲ್ಲಿ ತಕ್ಕೊಂಡು ಅವಳು ಮನೆಗೆ ಬಂದಳು. ಯಾಕೆಂದರೆ ಆಕೆಗೆ ಮಕ್ಕಳುಮರಿಗಳೇನೂ ಇರಲಿಲ್ಲ. ಅವಳ ಪತಿಯು ಪ್ರಸನ್ನಹೃದಯದಿಂದ ಶಿಶುವನ್ನು ಬರಮಾಡಿಕೊಂಡನು.

ಆ ಗುಬರಿನಲ್ಲಿ ಬಿದ್ದುಕೊಂಡ ಹಾಗೂ ಕುಲಶೀಲಗಳು ಗೊತ್ತಿಲ್ಲದ ಬಾಲಕನ ಪಾಲನ ಪೋಷಣವನ್ನು ಇಬ್ಬರೂ ಮಾಡತೊಡಗಿದರು. ಪ್ರಾರಂಭ ದಿಂದಲೇ ಅವರ ನೆರೆಯವನು ಕೊಂಕು ಮಾತಾಡತೊಡಗಿದನು. ಯಾವ ಜಾತಿಯ ಹುಡುಗನನ್ನು ಇವರು ಎತ್ತಿಕೊಂಡು ತಂದಿದ್ದಾರೆ ಯಾರುಬಲ್ಲರು? ಆ ಬಾಲಕನ ಸಲುವಾಗಿ ನೆರೆಯವನಿಗೆ ಅಸಂತುಷ್ಟಿಯಾಗುವದೆಂಬ ಅಂಜಿಕೆ ಯಿಂದ ಅವನು ಅದನ್ನು ಒಂದು ತೊಟ್ಟಿಲಲ್ಲಿ ಹಾಕಿ ಬಿಟ್ಟಿದ್ದಲ್ಲದೆ, ಅದನ್ನು

ಒಂದು ಲಾಯದ ಜಂತಿಗೆ ತೂಗಹಾಕಿದನು. ಅಲ್ಲಿ ಪರಿಯಾ ಜಾತಿಯ ಒಂದು ಕುಟುಂಬವಿರುತ್ತಿತ್ತು. ಬಾಲಕನ ಸಂರಕ್ಷಣೆಯ ಭಾರವನ್ನು ಅವರಿಗೊಪ್ಪಿಸಿ ಕೊಡಲಾಯಿತು.

ಕೆಲವು ವರುಷಗಳಾದ ಬಳಿಕ ಹುಡಗನು ದೊಡ್ಡವನಾದನು. ಆಯುಷ್ಯದೊಂದಿಗೆ ಆತನ ಮಾನಸಿಕ ಶಕ್ತಿಗಳೂ ಬೆಳೆದವು. ಆಗ ಆತನು ತನ್ನ ಪಾಲನಕರ್ತರಿಂದ ಅಪ್ಪಣೆ ಪಡಕೊಂಡನಲ್ಲದೆ ಒಬ್ಬನೇ ಯಾತ್ರೆಯ ಸಲುವಾಗಿ ಹೊರಬಿದ್ದನು. ಕೆಲವೊಂದು ದಿವಸ ನಡೆದುಕೊಂಡು ಹೋದ ಮೇಲೆ ಅವನು ಒಂದು ತಾಳವೃಕ್ಷದ ಕೆಳಗೆ ದಣಿವಾರಿಸಿಕೊಳ್ಳುವುದಕ್ಕಾಗಿ ಮಲಗಿಕೊಂಡನು. ಮರವು ಆತನಿಗೆ ತನ್ನ ನೆರಳು ಹೊದಿಸಿ ಕಾಪಾಡಿತು. ಆ ಮರವು ಸಹ ಅವನಿಗೆ ಮರಗಳ ಗುಬರಿನಿಂದ ತನ್ನನ್ನು ಎತ್ತಿಕೊಂಡು ತಂದ ಆ ಸ್ತ್ರೀಯ ಹಾಗೆಯೇ ಪ್ರೀತಿಸುತ್ತದೆಂದು ಅನಿಸಿತು. ತಾಳವೃಕ್ಷದ ತೊಂಗಲು ಅದೆಷ್ಟು ಉದ್ದವಾಗಿರುತ್ತದೆಂದರೆ ಯಾರಿಗಾದರೂ ಅದು ತನ್ನ ಎಲೆಗಳಿಂದ ಇಡಿಯ ದಿವಸ ನೆರಳು ಕೊಡಬಲ್ಲದೆಂಬ ಮಾತು ಅಸಂಭವವೆನಿಸುತ್ತದೆ. ಆದರೆ ಕಥೆಯು ಏನನ್ನು ಹೇಳುವುದೆಂದರೆ, ಸರ್ವಸಮಯವೂ ಅದರ ನೆರಳು ನಿಶ್ಚಲವಾಗಿ ನಿಂತಿತಲ್ಲದೆ ಆ ಬಾಲಕನು ಮಲಗಿಕೊಂಡಿರುವವರೆಗೆ ಅವನಿಗೆ ತಣುವು ಒದಗಿಸುತ್ತಿತ್ತು.

ಇದೆಲ್ಲ ಹೇಗೆ ಮತ್ತು ಏಕೆ ಆಯಿತು ?

ಜನ್ಮದಿಂದಲೇ ಆ ಬಾಲಕನ ಸಂರಕ್ಷಣೆಯ ಆವಶ್ಯಕತೆ ಏನಿತ್ತು ? ಹಾಗೂ ತಾಳದ ಮರವೇ ತನ್ನ ನೆರಳಿನಿಂದ ಆತನ ಸಂರಕ್ಷಣೆಯನ್ನು ಏಕೆ ಮಾಡಿತು ? ಯಾಕಂದರೆ ಅವನ ಜೀವನವು ಬೆಲೆಯುಳ್ಳದ್ದಾಗಿತ್ತು. ಆ ಬಾಲಕನು ಒಂದು ದಿನ ತಿರುವಲ್ಲುವರ ಎಂಬ ಹೆಸರಿನ ಪ್ರಸಿದ್ಧ ತಮಿಳು ಕವಿಯಾದ 'ಕುರಲ'ನ ಹನ್ನೆರಡು ಕವಿತೆಗಳ ಕಟ್ಟುಗಾರನಾಗಬೇಕಿತ್ತು.

ಜಗತ್ತಿನ ಸಲುವಾಗಿ ಕೆಲವೊಂದು ಸಂದೇಶಗಳನ್ನು ತಂದಿರುವ ಕಾರಣದಿಂದ ಆ ವಸ್ತುಗಳ ಹಾಗೂ ವ್ಯಕ್ತಿಗಳ ಸಂರಕ್ಷಣವಾಗಲೇ ಬೇಕು.

ಬಲಿಷ್ಠ ಬಾಹುಗಳನ್ನು ಕಂಡು ನಮಗೆ ಸಂತೋಷವಾಗಲಿಕ್ಕೆ ಬೇಕು. ಯಾಕೆಂದರೆ ಅವುಗಳ ಶಕ್ತಿಯಿಂದ ನಾವು ರೋಗದಿಂದಲೂ, ಮೃತ್ಯುವಿನಿಂದಲೂ ಸತ್ಯ, ಶಿವ ಹಾಗೂ ಸುಂದರವಾದ ಎಲ್ಲವುಗಳನ್ನೂ ಸಂರಕ್ಷಿಸಬಲ್ಲೆವು.

ಅವುಗಳನ್ನು ಸಂರಕ್ಷಿಸುವ ಸಲುವಾಗಿಯೇ ನಾವು ಒಮ್ಮೊಮ್ಮೆ ಕಾದಾಡಬೇಕು. ಹಾಗೂ ನಾಶಮಾಡಬೇಕು.

ತಿರುವಲ್ಲುವರರು ಜನರಿಗೆ ತಮ್ಮ ಅಮೃತ ವಚನಗಳ ಆಸ್ವಾದನವನ್ನಷ್ಟೇ ಮಾಡಿಸುತ್ತಿದ್ದಿಲ್ಲ. ಆದರೆ ಅವರು ಕಾದಾಟವನ್ನೂ ಮರಣವನ್ನೂ ಬೋಧಿಸುತ್ತಿದ್ದರು. ಅವರು ಕಾವೇರಿಪಕಮದ ಗ್ರಾಮದ ದೈತ್ಯನನ್ನು ಕೊಂದರು.

ಕಾವೇರಿಪಕಮದಲ್ಲಿ ಒಬ್ಬ ಒಕ್ಕಲಿಗನಿರುತ್ತಿದ್ದನು. ಅವನಿಗೆ ಒಂದು ಸಾವಿರ ದನಗಳೂ ಗೋದಿ ಬೆಳೆಯುವ ಕೆಲವು ವಿಸ್ತಾರವಾದ ಹೊಲಗಳೂ ಇದ್ದವು. ಆದರೆ ಆವನ ಸುತ್ತುಮುತ್ತು ಒಬ್ಬ ದೈತ್ಯನ ದೊಡ್ಡ ಅಂಜಿಕೆಯಿತ್ತು. ಕಾಳು ಒಕ್ಕುವ ಹೊತ್ತಿಗೆ ಸರಿಯಾಗಿ ಅವನು ಬೇರು ಸಹಿತ ಕಿತ್ತು ಹಾಕುತ್ತಿದ್ದನು. ದನಗಳನ್ನೂ ಮನುಷ್ಯರನ್ನೂ ಕೊಂದು ಬಿಡುತ್ತಿದ್ದನು. ಕಾವೇರಿಪಕಮ ಗ್ರಾಮವಾಸಿಗಳ ಹೃದಯವು ಅದರಿಂದ ಬಹಳ ಅಶಾಂತವಾಗಿ ಬಿಟ್ಟಿತು.

ಒಡೆಯನಾದ ಆ ಒಕ್ಕಲಿಗನು ಘೋಷಿಸಿದ್ದೇನಂದರೆ— "ಯಾವ ವೀರನು ನಮ್ಮನ್ನು ಈ ದೈತ್ಯನ ಅತ್ಯಾಚಾರದಿಂದ ಮುಕ್ತಗೊಳಿಸುವನೋ ಅವನಿಗೆ ನಾನೊಂದು ಮನೆ, ಹೊಲ ಹಾಗೂ ಬಹಳಷ್ಟು ದ್ರವ್ಯ ಕೊಡುವೆನು."

ಬಹಳ ಸಮಯದ ವರೆಗೆ ಯಾವ ವೀರನೂ ಮುಂದೆ ಬರಲಿಲ್ಲ. ಒಕ್ಕಲಿಗನು ಆಗ ಪರ್ವತದ ಮೇಲಿರುವ ಮುನಿಗಳ ಬಳಿಗೆ ಹೋದನು. ಹಾಗೂ ರಾಕ್ಷಸನನ್ನು ಕೊಲ್ಲಬಲ್ಲವನ ಸ್ಥಳವನ್ನು ಕೇಳಿದನು.

ಪರ್ವತವಾಸಿಯಾದ ಮುನಿ ಹೇಳಿದನು— "ತಿರುವಲ್ಲುವರನ ಬಳಿಗೆ ಹೋಗು."

ಈ ಪ್ರಕಾರ ಆ ಒಕ್ಕಲಿಗನು ತಿರುವಲ್ಲುವರನ ಬಳಿಗೆ ಬಂದು ಸಹಾಯಕ್ಕಾಗಿ ಅವನನ್ನು ಪ್ರಾರ್ಥಿಸಿದನು. ಅವನು ತುಸು ಬೂದಿಯನ್ನು ಅಂಗೈಯಲ್ಲಿ ತಕ್ಕೊಂಡು ಅದರ ಮೇಲೆ ಐದು ಪವಿತ್ರ ಅಕ್ಷರಗಳನ್ನು ಬರೆದನು. ಮತ್ತೆ ಮಂತ್ರ ಪಠಿಸಿ ಆ ಬೂದಿಯನ್ನು ಮೇಲೆ ಹವೆಯಲ್ಲಿ ತೂರಿಬಿಟ್ಟನು. ಆ ಅಕ್ಷರಗಳ ಹಾಗೂ ಮಂತ್ರದ ಪ್ರಭಾವವು ಆ ದೈತ್ಯನ ಮೇಲೆ ಅದೆಷ್ಟು ಬಿದ್ದಿತೆಂದರೆ—ಅವನು ಸತ್ತೇ ಹೋದನು. ಕಾವೇರಿಪಕಮದ ಜನರು ಅದರಿಂದ ಬಹಳ ಸಂತುಷ್ಟರಾದರು.

ಕೆಲವು ವರುಷಗಳ ಮೊದಲಿನ ಮಾತು. ಒಂದು ಸಾರೆ ತಿರುವಲ್ಲುವರನು ಮಧುರಾ ನಗರಕ್ಕೆ ಹೋದನು. ಅದೆಷ್ಟೋ ಜನರು ಅವನ ಸುಂದರವಾದ ಕವಿತೆಗಳನ್ನು ಕೇಳುವ ಸಲುವಾಗಿ ಒಟ್ಟುಗೂಡಿದರು. ಗಿಡಗಳ ಗುಬರಿನಲ್ಲಿ ಕಾಣಿಸಿಕೊಂಡಿದ್ದ ಬಾಲಕನಿಂದ ರಚಿತವಾದ ಪದಗಳನ್ನು ಕೇಳಿ ಅವರು ಮುಗ್ಧರಾಗಿಹೋದರು.—

"ಒಳ್ಳೆಯವನಾಗುವುದಕ್ಕಿಂತ ಹೆಚ್ಚಿನ ಇನ್ನಾವ ವಸ್ತುವೂ ಈ ಜಗತ್ತಿನಲ್ಲಿ ಸಿಗುವುದು ಅತ್ಯಂತ ಕಠಿಣವಾಗಿದೆ."

ಅಲ್ಲಿ ಸಮೀಪದಲ್ಲಿಯೇ ಅರಳಿದ ಕಮಲಗಳುಳ್ಳ ಒಂದು ಕೆರೆಯ ದಂಡೆಯ ಬೆಂಚಿನ ಮೇಲೆ ಪಂಡಿತ ಕವಿಗಳ ಒಂದು ಗುಂಪು ಕುಳಿತಿತ್ತು. ಅವರು ಒಂದು ನೀಚ ಜಾತಿಯ ಕವಿಯನ್ನು ಬೆಂಚಿನ ಮೇಲೆ ತಮ್ಮೊಡನೆ

ಸ್ಥಾನ ಕೊಡಬಾರದೆನ್ನುತ್ತಿದ್ದರು. ಅವರು ಪ್ರಶ್ನೆಯ ಮೇಲೆ ಪ್ರಶ್ನೆಮಾಡಿ ಅವನನ್ನು ಭ್ರಮೆಯಲ್ಲಿ ಕೆಡಹಿ ಅವನ ತಪ್ಪು ಹಿಡಿಯುವ ಪ್ರಯತ್ನ ಮಾಡುತ್ತಿದ್ದರು. ಕೊನೆಗೆ ಅವರು ತಿರುವಲ್ಲುವರನಿಗೆ ನುಡಿದದ್ದೇನೆಂದರೆ—

"ಓ ಪರಿಯಾ, ನಿನ್ನ ಕವಿತೆಯ ಪುಸ್ತಕವನ್ನು ನೀನು ಈ ಬೆಂಚಿನ ಮೇಲಿಡು. ಇದು ನಿಜವಾಗಿಯೂ ಸುಂದರ ಸಾಹಿತ್ಯದ ಕೃತಿಯಾಗಿದ್ದಕ್ಕೆ ಈ ಬೆಂಚು 'ಕುರಲ'ರ ಹೊರತಾಗಿ ಇನ್ನಾರಿಗೂ ತನ್ನ ಮೇಲೆ ಸ್ಥಳ ಕೊಡುವದಿಲ್ಲ."

ತಿರುವಲ್ಲುವರನು ತನ್ನ ಪುಸ್ತಕವನ್ನು ನೀರಿನ ಸಮೀಪದಲ್ಲಿರುವ ಆ ಬೆಂಚಿನ ಮೇಲೆ ಇಟ್ಟುಬಿಟ್ಟನು. ಕಥೆಯು ಮುಂದೆ ಹೇಳುವದೇನೆಂದರೆ— ಪುಸ್ತಕವನ್ನು ಬೆಂಚಿನ ಮೇಲೆ ಇಟ್ಟಕೂಡಲೇ ಆ ಬೆಂಚವು ಅದೆಷ್ಟು ಚಿಕ್ಕ ದಾಯಿತೆಂದರೆ ಅದರ ಮೇಲೆ ಕೇವಲ ಪುಸ್ತಕಕ್ಕೆ ಮಾತ್ರ ಸ್ಥಳ ಸಿಗಲು ಸಾಧ್ಯವಾಯಿತಲ್ಲದೆ ಮಧುರೆಯ ಆ ಅಭಿಮಾನಿಗಳೂ ಈರ್ಷಾಲುಗಳೂ ಆದ ಕವಿಗಳು ಇನ್ನೊಂದು ಕಡೆಯ ಕೆರೆಯ ನೀರಲ್ಲಿ ಉರುಳಿಬಿದ್ದರು. ಅಹುದು. ಹೊಟ್ಟೆಕಿಚ್ಚಿನವರು ಕೆರೆಯಲ್ಲಿ ಕಮಲಗಳ ನಡುವೆ ಹೋಗಿ ಬಿದ್ದರು. ಲಜ್ಜಿತ ಮುಖ, ತೊಯ್ದ ಶರೀರಗಳೊಡನೆ ಅವರು ಹೊರಬಿದ್ದರು. ಅಂದಿ ನಿಂದ ತಮಿಲ ಭಾಷಾಭ್ಯಾಸಿಗಳು 'ಕುರಲ'ರನ್ನು ಬಹಳವಾಗಿ ಪ್ರೇಮಿಸ ತೊಡಗಿದ್ದಾರೆ.

ಮಕ್ಕಳೇ, ಕಾವೇರಿಪಕಮದ ರಾಕ್ಷಸನನ್ನು ಹೊಡೆದು ಹಾಕಿದ್ದು ನಿಮಗೆ ಒಳ್ಳೆಯದೆನಿಸುವದಿಲ್ಲವೇ? ಮಧುರೆಯ ಆ ಹೊಟ್ಟೆಯುರಿಯ ಕವಿಗಳು ನೀರಲ್ಲಿ ಉರುಳಿಬಿದ್ದುದರಿಂದ ನಿಮಗೆ ದುಃಖವಾಯಿತೇ?

ಈ ಜಗತ್ತಿನಲ್ಲಿ ಒಳ್ಳೆಯ ವಸ್ತುಗಳೂ ಅವೆ. ಕೆಟ್ಟವೂ ಅವೆ. ನಾವು ಒಳ್ಳೆಯವುಗಳನ್ನು ಪ್ರೇಮಿಸತಕ್ಕದ್ದು. ಹಾಗೂ ಅವುಗಳನ್ನು ಸಂರಕ್ಷಿಸ

ತಕ್ಕದ್ದು. ಮತ್ತು ಕೆಟ್ಟವುಗಳೊಡನೆ ಹೋರಾಡತಕ್ಕದ್ದಲ್ಲದೆ ಅವುಗಳನ್ನು ನಾಶಗೊಳಿಸತಕ್ಕದ್ದು.

ಆ ಒಳ್ಳೆಯ ಕವಿಯಂತೆ ಸರ್ವ ಬುದ್ಧಿವಂತ ಜನರು ಹೀಗೆ ಮಾಡಲು ಬಲ್ಲವರಾಗಿದ್ದಾರೆ. ಮತ್ತು ಮಾಡಲೂ ಬಲ್ಲರು. ಅದೆಷ್ಟು ಹೆಚ್ಚು ಅವರು ಬುದ್ಧಿಶಾಲಿಗಳಾಗುವರೋ ಅಷ್ಟೇ ಈ ಕಾರ್ಯವನ್ನು ಅವರು ಚೆನ್ನಾಗಿ ಮಾಡ ಬಲ್ಲರು. ಚಿಕ್ಕಮಕ್ಕಳೇ, ಯಾರ ಬುದ್ಧಿಯು ಇನ್ನೂ ಅಷ್ಟೊಂದು ವಿಕಸಿತ ವಾಗಿಲ್ಲವೋ ಮತ್ತು ಯಾರು ಅಷ್ಟೊಂದು ಬಲವನ್ನೂ ಪಡೆದಿಲ್ಲವೋ ಅವರು ಅನುಕರಣಮಾಡಿ ತಮ್ಮ ಸಾಹಸವನ್ನು ಪ್ರಯೋಗಿಸಬಹುದು.

ತಿರುವಲ್ಲುವರನ ಭಗಿನಿಯಾದ **ಅವೇ** ತನ್ನ ಬಂಧುವಿನ ಅನುಕರಣ ವನ್ನು ಇದೇ ಪ್ರಕಾರ ಮಾಡಿದಳು.

ಒಂದು ದಿನ ಅವಳು ಉರಾಯಿಯೂರ ಗ್ರಾಮದ ಒಂದು ಚಿಕ್ಕ ಓಣಿಯಲ್ಲಿ ನೆಲದ ಮೇಲೆ ಕುಳಿತಿದ್ದಳು. ಮೂವರು ವ್ಯಕ್ತಿಗಳು ಅಡ್ಡಾಡುತ್ತ ಅಲ್ಲಿಂದ ಹೊರಟರು. ಒಬ್ಬನು ರಾಜನಿದ್ದನು. ಇಬ್ಬರು ಕವಿಗಳು. ರಾಜನು ಬಂದಾಗ ಅವಳು ಒಂದು ಮೊಳಕಾಲೂರಿ ಅವನಿಗೆ ತನ್ನ ಸಂತೋಷವನ್ನು ತೋರ್ಪಡಿಸಿದಳು. ಬಳಿಕ ಕವಿಯು ಬಂದನು. ಅವನ ಸನ್ಮಾನಾರ್ಥ ವಾಗಿ ಅವಳು ತನ್ನ ಇನ್ನೊಂದು ಮೊಳಕಾಲನ್ನು ಊರಿದಳು. ಆದರೆ ಇನ್ನೊಬ್ಬ ಕವಿಯು ಆಕೆಯ ಸಮೀಪ ಬಂದಾಗ ಅವಳು ತನ್ನ ಎರಡೂ ಕಾಲು ಚಾಚಿ ದಾರಿಯನ್ನೇ ತಡೆಗಟ್ಟಿದಳು.

ಆಕೆಯ ನಡವಳಿಕೆಯ ಈ ರೀತಿಯು ಅನುಚಿತವಾಗಿಯೇ ಕಂಡಿತು. ಆದರೆ **ಅವೇ** ತನ್ನ ಹೊಣೆಗಾರಿಕೆಯನ್ನು ಚೆನ್ನಾಗಿ ತಿಳಿಯುತ್ತಿದ್ದಳು. ವಾಸ್ತವದಲ್ಲಿ ಎರಡನೇ ಕವಿಯು ಒಬ್ಬ ತೋರಿಕೆಯ ಮನುಷ್ಯನಾಗಿದ್ದನು. ಅವನಲ್ಲಿ ಪ್ರತಿಭೆಯೆನ್ನುವುದು ಎಷ್ಟೂ ಇರಲಿಲ್ಲ. ಅವನು ಸ್ಪಷ್ಟವಾಗಿ ನಟನೆ ಯನ್ನೇ ಮಾಡುತ್ತಿದ್ದನು.

ಕವಿಗೆ ಇದರಿಂದ ಸಿಟ್ಟು ಬಂತು. ಅವನು ಆವೇಗೆ ಆಕೆಯ ಆ ನಡವಳಿಕೆಯ ಕಾರಣವನ್ನು ಕೇಳಿದನು.

''ಮನ ಶಬ್ದವು ಮೂರು ಸಾರೆ ಬರುವಂತೆ ಒಂದು ಪದ ರಚಿಸು'' ಎಂಬ ಆಕೆ ನುಡಿದಳು.

ಅದನ್ನು ನೋಡಿ ಅಲ್ಲಿ ಅದೆಷ್ಟೋ ಜನರು ಒಟ್ಟುಗೂಡಿದರು. ಕವಿಯು ತನ್ನ ವಿದ್ವತ್ತೆಯನ್ನು ತೋರಿಸುವುದಕ್ಕೆ ಒಳ್ಳೆಯ ಪ್ರಸಂಗವನ್ನು ಕಂಡನು. ಅವನು ಬಹಳವಾಗಿ ಪ್ರಯತ್ನಿಸಿದನು. ಆದರೆ ಎರಡುಸಾರೆಗಿಂತ ಹೆಚ್ಚು ಅವುಗಳನ್ನು ಯಾವ ಬಗೆಯಿಂದಲೂ ತನ್ನ ಕವಿತೆಯಲ್ಲಿ ತರಲಿಕ್ಕೆ ಸಮರ್ಥನಾಗಲಿಲ್ಲ.

ಆವೇ ವ್ಯಂಗ್ಯವಾಗಿ ನುಡಿದಳು.— ''ಆ ಮೂರನೇ ಶಬ್ದವು ಏನಾಯಿತು ? ಯಾವುದು ನಿನ್ನನ್ನು ಇಲ್ಲಿ ತಡೆಗಟ್ಟಿತು ? ಯಾವುದಕ್ಕೆ ನಿನ್ನ ಕವಿತೆಯಲ್ಲಿಯೂ ಸ್ಥಳ ಸಿಕ್ಕಲಿಲ್ಲ ? '' ಈ ಪ್ರಕಾರ ಅವಳು ಆ ಸೋಗಿಗೆ ಲಜ್ಜಿತಗೊಳಿಸಿದಳು.

ಆವೇ ತನ್ನ ಈ ಅಶಿಷ್ಟ ವ್ಯವಹಾರದಲ್ಲಿ ಸಂತೋಷಪಟ್ಟಳೆಂದು ನೀವು ಯೋಚಿಸುವಿರಾ ? ಇಲ್ಲ. ಆದರೆ ಸೋಗು ಅವಳಿಗೆ ಆದರಣೀಯವೆಂದು ಅನಿಸಲಿಲ್ಲ. ಯಾರ ಸತ್ಕಾರವು ಆಗಬೇಕು, ಯಾರದು ಆಗಬಾರದು— ಎಂಬ ಮಾತಿನ ವಿವೇಚನೆಯನ್ನು ಅವಳು ಮಾಡಬಲ್ಲವಳಾಗಿದ್ದಳು. ಅವಳು ನುಡಿಯುತ್ತಿದ್ದಳು.— ''ಆ ಹಂಸದಂತೆ ಯಾವಾಗಲೂ ಅರಳಿದ ಕಮಲ-ಯುಕ್ತ ಉಯ್ಯಾಲೆಯ ಕಡೆಗೇ ಹೋಗುವ ಶ್ರೇಷ್ಠ ಪುರುಷರು ಯಾವಾಗಲೂ ಒಳ್ಳೆಯ ವಸ್ತುವಿನ ಕಡೆಗೆ ಒಲಿಯುತ್ತಾರೆ. ಆದರೆ ದುಷ್ಟ ಪ್ರಕೃತಿಯ ಜನರು ಯಾವಾಗಲೂ ಕೆಟ್ಟದನ್ನೇ ಹುಡುಕುತ್ತಾರೆ. ಹದ್ದು ದುರ್ಗಂಧ ದಿಂದ ಆಕರ್ಷಿತವಾಗಿ ಕೊಳೆತು ನಾರುವ ದನಗಳನ್ನು ಹೋಗಿ ಹಿಡಿಯುವ ಹಾಗೆ.''

ಜಗತ್ತಿನ ಸರ್ವದೇಶಗಳ ಬಾಲಕರೇ, ಕೆಟ್ಟ ವಸ್ತುಗಳ ವಿರುದ್ಧವ
ನೀವು ಕಾದಾಡಲು ಕಲಿಯತಕ್ಕದ್ದು. ಎಂಥ ವಸ್ತುಗಳನ್ನು ನೀವು ನ
ಗೊಳಿಸತಕ್ಕದ್ದು? ಎಂಥ ವಸ್ತುಗಳ ಮೇಲೆ ನೀವು ಅಧಿಕಾರ ಸ್ಥಾ
ತಕ್ಕದ್ದು? ಮನುಷ್ಯ ಜೀವನ ಇಲ್ಲವೆ ಅವನ ಉನ್ನತಿಯ ಸಲುವ
ಹಾನಿಕಾರಕವಾಗಿರುವ ಹಾಗೂ ಅವನನ್ನು ಅಧೋಗತಿಯ ಅಥವಾ ದುಃ
ಕಡೆಗೆ ತಿಗೆದುಕೊಂಡು ಹೋಗುವ ಸರ್ವವಸ್ತುಗಳ ಮೇಲೆ.

ವೇಗಶಾಲಿಯಾದ ನದಿಗಳ ಮೇಲೆ ಸೇತುವೆ ಹಾಗೂ ಪ್ರವಾಹವನ್ನು ಕಟ್ಟಿ ನಿಲ್ಲಿಸುವ ಸಲುವಾಗಿ ಆಣೆಕಟ್ಟು ಮಾಡಿಕೊಂಡು ಮನುಷ್ಯನು ನೀರಿನ ದುರ್ದಮವಾದ ವೇಗವನ್ನು ವಶಪಡಿಸಿಕೊಳ್ಳತಕ್ಕದ್ದು.

ಹವೆ ಹಾಗೂ ತೆರೆಗಳ ಪ್ರಚಂಡತೆಯನ್ನು ಎದುರಿಸಬಲ್ಲ ಹಡಗುಗಳನ್ನು ಕಟ್ಟಿಕೊಳ್ಳತಕ್ಕದ್ದು.

ಜವಳು ಭೂಮಿಯ ಘಾತುಕವಾದ ರೊಜ್ಜು ನೀರನ್ನು ಹೊರಡಿಸತಕ್ಕದ್ದು. ಇಲ್ಲವೆ ಒಣಗಿಸಿ ಬಿಡತಕ್ಕದ್ದು. ಈ ಪ್ರಕಾರ, ಅದರ ತೇವಿನಲ್ಲಿರುವ ಜ್ವರರೂಪಿ ದೈತ್ಯನನ್ನು ನಾಶಗೊಳಿಸತಕ್ಕದ್ದು.

ಕಾಡುಮೃಗಗಳು ಇರುವಲ್ಲಿ ಇಲ್ಲವೆ ಅವುಗಳ ಅಂಜಿಕೆಯಿರುವಲ್ಲಿ ಹೋರಾಟ ಎಬ್ಬಿಸಿ ಅವುಗಳ ನಾಶಮಾಡತಕ್ಕದ್ದು.

ಎಲ್ಲ ಕಡೆಯಲ್ಲಿಯ ದುಃಖದ ಕುತ್ತುಗಳನ್ನೂ ಕಾಯಿಲೆಗಳನ್ನೂ ಓಡಿಸುವ ಜಾಣರಾದ ವೈದ್ಯರು ಹುಟ್ಟತಕ್ಕದ್ದು.

ಮನುಷ್ಯನ ಹಸಿವೆಗೆ ಮುಖ್ಯ ಕಾರಣವಾದ ಬಡತನವನ್ನು ಗೆಲ್ಲ
ಪ್ರಯತ್ನ ಮಾಡತಕ್ಕದ್ದು. ಯಾರ ಮಕ್ಕಳಿಗೆ ರೊಟ್ಟಿಗೂ ಗತಿಯಿರು
ದಿಲ್ಲವೋ ಅಂಥ ತಾಯಿಯರನ್ನು ಆ ಹಸಿವೆಯೇ ಆಳಿಸುತ್ತದೆ.

ಎಲ್ಲರ ಜೀವನವನ್ನು ದುಃಖಮಯ ಮಾಡುವ ದುಷ್ಕೃತಿ, ಈರ್ಷೆ ಹಾಗೂ ಅನ್ಯಾಯಗಳನ್ನು ನಾಶಗೊಳಿಸತಕ್ಕದ್ದು.

* * * *

ಇದಕ್ಕೆ ವಿಪರೀತವಾಗಿ ಯಾವ ವಸ್ತುಗಳಿವೆಯೋ ಅವುಗಳನ್ನು ಮನುಷ್ಯನು ಪ್ರೇಮಿಸತಕ್ಕದ್ದು. ಅವುಗಳನ್ನು ರಕ್ಷಿಸತಕ್ಕದ್ದು.

ಈ ಜಗತ್ತಿನಲ್ಲಿ ಬರುವ ಪ್ರತ್ಯೇಕ ಬಾಲಕನ ಅಮೂಲ್ಯ ಜೀವನದ ರಕ್ಷಣೆ ಆಗತಕ್ಕದ್ದು.

ಲಾಭಕಾರೀ ಗಿಡಗಳನ್ನು ಸಂರಕ್ಷಿಸತಕ್ಕದ್ದು. ಆಹಾರವನ್ನೂ ಆನಂದವನ್ನೂ ಕೊಡುವ ಹೂವು ಹಾಗೂ ಪೊದೆಗಳನ್ನು ಬೆಳೆಸತಕ್ಕದ್ದು.

ಗಟ್ಟಿಮುಟ್ಟವೂ ಆರೋಗ್ಯಪ್ರದವೂ ಹವೆಯಾಡುವಂಥವೂ ಆದ ಮನೆಗಳನ್ನು ಕಟ್ಟತಕ್ಕದ್ದು.

ಪವಿತ್ರವಾದ ದೇವಾಲಯಗಳು, ಮೂರ್ತಿಗಳು, ಚಿತ್ರ-ರಂಗವಲ್ಲಿ-ಕಸೂತಿ ಕೆಲಸಗಳು, ಸುಮಧುರವಾದ ಹಾಡುಗಳು, ಲಲಿತ ಕವಿತೆಗಳು ಇವೆಲ್ಲವುಗಳನ್ನು ಮಹಾಸಾವಧಾನದಿಂದ ಸಂರಕ್ಷಿಸಿಕೊಳ್ಳತಕ್ಕದ್ದು. ಸಂಕ್ಷೇಪದಲ್ಲಿ ಯಾವುದು ಸುಂದರವಾಗುವುದರಿಂದ ಮನುಷ್ಯನ ಆನಂದವನ್ನು ಹೆಚ್ಚಿಸುವವೋ ಆ ಎಲ್ಲ ವಸ್ತುಗಳ ಸಂರಕ್ಷಣೆಯಾಗತಕ್ಕದ್ದು.

ಭಾರತವರ್ಷದ ಹಾಗೂ ಬೇರೆ ದೇಶಗಳ ಬಾಲಕರೇ, ಎಲ್ಲಕ್ಕಿಂತ ದೊಡ್ಡ ಮಾತು ಯಾವುದೆಂದರೆ—ಮನುಷ್ಯನನ್ನು ಪ್ರೇಮಿಸುವ ಹೃದಯವನ್ನು ರಕ್ಷಿಸಿಕೊಳ್ಳತಕ್ಕದ್ದು. ಸತ್ಯವಿಚಾರವನ್ನು ಮಾಡಬಲ್ಲ ಬುದ್ಧಿಯನ್ನು ರಕ್ಷಿಸಿಕೊಳ್ಳತಕ್ಕದ್ದು. ಸತ್ಯವೂ ನ್ಯಾಯಯುಕ್ತವೂ ಆದ ಕಾರ್ಯಮಾಡುವ ಕೈಗಳನ್ನು ರಕ್ಷಿಸಿಕೊಳ್ಳತಕ್ಕದ್ದು.

ಓಂ! ಭಗವತೀ!!

ಕನ್ನಡದಲ್ಲಿ

# ಶ್ರೀ ಅರವಿಂದರ ತತ್ತ್ವ-ಸಾಹಿತ್ಯ



| | | |
|---|---|---|
| ೧. | ಶ್ರೀ ಅರವಿಂದರು (ಚರಿತ್ರ) .... .... | ೧-೧೨-೦ |
| ೨. | ಧರ್ಮ ಹಾಗೂ ರಾಷ್ಟ್ರೀಯತ್ವ (ಪ್ರಬಂಧಗಳು) .... | ೧- ೮-೦ |
| ೩. | ಧರ್ಮಕ್ಷೇತ್ರೇ ಕುರುಕ್ಷೇತ್ರೆ .... .... | ೦- ೮-೦ |
| ೪. | ಶ್ರೀ ಅರವಿಂದರ ಪತ್ರಗಳು .... .... | ೦- ೮-೦ |
| ೫. | ಉತ್ತರಪಾರಾ ಉಪನ್ಯಾಸ .... .... | ೦- ೬-೦ |
| ೬. | ಪೂರ್ಣಯೋಗ (ಸಿಂಥೆಸಿಸ್ ಆಫ್ ಯೋಗದ ಸಾರಾಂಶ) | ೧- ೦-೦ |
| ೭. | ಯೋಗದೀಕ್ಷೆ .... .... | ೧- ೦-೦ |
| ೮. | ಮುಗಿಲಜೇನು (ಕವನ ಸಂಗ್ರಹ) .... .... | ೧- ೮-೦ |
| ೯. | ಪೂಜಾ (ಗದ್ಯಗೀತಗಳು) .... .... | ೦-೧೨-೦ |
| ೧೦. | ಸ್ವರ್ಗದೋಲೆಗಳು .... .... | ೧- ೮-೦ |
| ೧೧. | ಜೀವನದೃಷ್ಟಿ (ಪ್ರಬಂಧಗಳು) .... .... | ೧- ೨-೦ |
| ೧೨. | ಕನ್ನಡ ಕುಲದೀಪ ಬಸವಣ್ಣ .... .... | ೧- ೦-೦ |
| ೧೩. | ಭಾರತದ ಭವ್ಯಸಿದ್ಧತೆ .... .... | ೧- ೦-೦ |

## ಇತರ ಗ್ರಂಥಗಳು

| | | |
|---|---|---|
| ೧. | ಪವಿತ್ರ ಜೀವನ (ಕಥಾಸಂಗ್ರಹ) .... .... | ೧- ೮-೦ |
| ೨. | ಬೆಟ್ಟದ ಹೊಳೆ (ಕಾದಂಬರಿ) .... .... | ೧- ೪-೦ |
| ೩. | ದತ್ತಸಾಹಿತ್ಯ .... .... | ೧- ೮-೦ |
| ೪. | ಹಳ್ಳಿಯ ಮಹಾತ್ಮ .... .... | ೦-೧೨-೦ |

—ಶ್ರೀ ಅರವಿಂದ ಗ್ರಂಥಾಲಯ
ಪೋ. ಚಡಚಣ
ಜಿ. ವಿಜಾಪುರ